# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಮೇ ೭, ೨೦೧೫ (ವೈಶಾಖ ೧೭, ಶಕ ವರ್ಷ ೧೯೩೭)<br>Bangalore, Thursday, May 7, 2015 (Viashakha 17, Shaka Varsha 1937) | ಸಂಚಿಕೆ ೧೯<br>Issue 19 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ:** ಚಿಕ್ಕಮಗಳೂರು ಗ್ರಾಮಾಂತರ ಪೊಲೀಸ್ ಠಾಣಾ ವ್ಯಾಪ್ತಿಯ ಕೆಲವೊಂದು ಪ್ರದೇಶಗಳನ್ನು ಚಿಕ್ಕಮಗಳೂರು ನಗರ ಪೊಲೀಸ್ ಠಾಣಾ ವ್ಯಾಪ್ತಿಗೆ ಸೇರಿಸುವ ಬಗ್ಗೆ.

**ಓದಲಾಗಿದೆ:** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರ ಸಂಖ್ಯೆ. ಆರ್.ಎಲ್.ಎನ್(6)50/2014-15, ದಿನಾಂಕ: 30.1.2015.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 30.1.2015 ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಚಿಕ್ಕಮಗಳೂರು ಜಿಲ್ಲಾ ಪೊಲೀಸ್ ಘಟಕದ ಚಿಕ್ಕಮಗಳೂರು ಉಪವಿಭಾಗದ ಚಿಕ್ಕಮಗಳೂರು ಗ್ರಾಮಾಂತರ ವೃತ್ತ ವ್ಯಾಪ್ತಿಯಲ್ಲಿರುವ ಚಿಕ್ಕಮಗಳೂರು ಗ್ರಾಮಾಂತರ ಪೊಲೀಸ್ ಠಾಣೆಗಳ ಸರಹದ್ದಿನ ಕೆಲವೊಂದು ಪ್ರದೇಶಗಳು ಚಿಕ್ಕಮಗಳೂರು ನಗರಸಭಾ ವ್ಯಾಪ್ತಿಗೆ ಒಳಪಟ್ಟಿರುತ್ತದೆ. ಆದ್ದರಿಂದ, ಕೆಳಕಂಡ ಪ್ರದೇಶಗಳನ್ನು ಸಾರ್ವಜನಿಕರಿಗೆ ಅನುಕೂಲವಾಗುವ ದೃಷ್ಟಿಯಿಂದ ಚಿಕ್ಕಮಗಳೂರು ಉಪವಿಭಾಗದ ಚಿಕ್ಕಮಗಳೂರು ನಗರ ಸಿಪಿಐ ವೃತ್ತ ವ್ಯಾಪ್ತಿಯಲ್ಲಿರುವ ಚಿಕ್ಕಮಗಳೂರು ನಗರ ಪೊಲೀಸ್ ಠಾಣೆಗೆ ಸೇರಿಸಿ ಸರ್ಕಾರದ ಮಂಜೂರಾತಿ ಕೋರಿರುತ್ತಾರೆ. ಹಾಗೂ ಇದರಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ಹೊರೆಯಾಗುವುದಿಲ್ಲವೆಂದು ತಿಳಿಸಿರುತ್ತಾರೆ.

| ಕ್ರ. ಸಂ. | ಗ್ರಾಮದ ಹೆಸರು | ಪ್ರಸ್ತುತ ಇರುವ ಪೊಲೀಸ್ ಠಾಣೆ | ಯಾವ ಪೊಲೀಸ್ ಠಾಣೆಗೆ ಸೇರಿಸಬೇಕು |
|---|---|---|---|
| 1. | ಹೌಸಿಂಗ್‌ಬೋರ್ಡ್ ಕಾಲೋನಿ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 2. | ನರಿಗುಡ್ಡನಹಳ್ಳಿ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 3. | ಚಿಕ್ಕಕುರುಬರಹಳ್ಳಿ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 4. | ದೊಡ್ಡಕುರುಬರಹಳ್ಳಿ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 5. | ಕಲ್ಯಾಣನಗರ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 6. | ಮಾರುತಿನಗರ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 7. | ನಲ್ಲೂರು ಗೇಟ್ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 8. | ಪಾರ್ವತಿಪುರ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 9. | ಆದರ್ಶನಗರ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 10. | ಕಂಬಿಖಾನ್ ಹಳ್ಳಿ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 11. | ಗವನಹಳ್ಳಿ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 12. | ರಾಂಪುರ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 13. | ಆದಿಶಕ್ತಿನಗರ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 14. | ಮೂರುಮನೆಹಳ್ಳಿ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 15. | ಉಂಡೆದಾಸರಹಳ್ಳಿ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ. ಹೆಚ್‌ಡಿ 65 ಪಿಓಪಿ 2015, ಬೆಂಗಳೂರು, ದಿನಾಂಕ: 19.2.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಚಿಕ್ಕಮಗಳೂರು ಜಿಲ್ಲಾ ಪೊಲೀಸ್ ಘಟಕದ ಚಿಕ್ಕಮಗಳೂರು ಉಪವಿಭಾಗದ ಚಿಕ್ಕಮಗಳೂರು ಗ್ರಾಮಾಂತರ ವೃತ್ತ ವ್ಯಾಪ್ತಿಯಲ್ಲಿರುವ ಚಿಕ್ಕಮಗಳೂರು ಗ್ರಾಮಾಂತರ ಪೊಲೀಸ್ ಠಾಣೆಗಳ ಸರಹದ್ದಿನ ಈ ಕೆಳಕಂಡ ಪ್ರದೇಶಗಳನ್ನು ಸಾರ್ವಜನಿಕರಿಗೆ ಅನುಕೂಲವಾಗುವ ದೃಷ್ಟಿಯಿಂದ ಚಿಕ್ಕಮಗಳೂರು ಉಪವಿಭಾಗದ ಚಿಕ್ಕಮಗಳೂರು ನಗರ ಸಿಪಿಐ ವೃತ್ತ ವ್ಯಾಪ್ತಿಯಲ್ಲಿರುವ ಚಿಕ್ಕಮಗಳೂರು ನಗರ ಪೊಲೀಸ್ ಠಾಣೆಗೆ ಸೇರಿಸಲು ಸರ್ಕಾರದ ಅನುಮೋದನೆಯನ್ನು ನೀಡಿದೆ.

| ಕ್ರ. ಸಂ. | ಗ್ರಾಮದ ಹೆಸರು | ಪ್ರಸ್ತುತ ಇರುವ ಪೊಲೀಸ್ ಠಾಣೆ | ಯಾವ ಪೊಲೀಸ್ ಠಾಣೆಗೆ ಸೇರಿಸಬೇಕು |
|---|---|---|---|
| 1. | ಹೌಸಿಂಗ್‌ಬೋರ್ಡ್ ಕಾಲೋನಿ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 2. | ನರಿಗುಡ್ಡನಹಳ್ಳಿ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 3. | ಚಿಕ್ಕಕುರುಬರಹಳ್ಳಿ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 4. | ದೊಡ್ಡಕುರುಬರಹಳ್ಳಿ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 5. | ಕಲ್ಯಾಣನಗರ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 6. | ಮಾರುತಿನಗರ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 7. | ನಲ್ಲೂರು ಗೇಟ್ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 8. | ಪಾರ್ವತಿಪುರ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 9. | ಆದರ್ಶನಗರ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 10. | ಕಂಬಿಖಾನ್ ಹಳ್ಳಿ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 11. | ಗವನಹಳ್ಳಿ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 12. | ರಾಂಪುರ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 13. | ಆದಿಶಕ್ತಿನಗರ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 14. | ಮೂರುಮನೆಹಳ್ಳಿ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |
| 15. | ಉಂಡೆದಾಸರಹಳ್ಳಿ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ | ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್.ಪುಟ್ಟೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ).

PR. 230

SC. 50

## ಒಳಾಡಳಿತ ಸಚಿವಾಲಯ

**ವಿಷಯ:** ಚಿಕ್ಕಮಗಳೂರು ಜಿಲ್ಲೆಯ ಲಿಂಗದಹಳ್ಳಿ ಪೊಲೀಸ್ ಠಾಣೆಯ ಕೆಲವೊಂದು ಗ್ರಾಮಗಳನ್ನು ಹಾಗೂ ಮಲ್ಲಂದೂರು ಪೊಲೀಸ್ ಠಾಣೆಯ ಒಂದು ಗ್ರಾಮವನ್ನು ಚಿಕ್ಕಮಗಳೂರು ಗ್ರಾಮಾಂತರ ಪೊಲೀಸ್ ಠಾಣೆಗೆ ಸೇರಿಸುವ ಬಗ್ಗೆ.

**ಓದಲಾಗಿದೆ:** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರ ಸಂಖ್ಯೆ. ಆರ್‌ಎಲ್‌ಎನ್(6)51/2014-15, ದಿನಾಂಕ: 5.2.2015.

ಪ್ರಸ್ತಾವನೆ:

ಮೇಲೆ ಓದಲಾದ ದಿನಾಂಕ: 5.2.2015 ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ಉಪವಿಭಾಗದ ತರೀಕೆರೆ ಗ್ರಾಮಾಂತರ ವೃತ್ತದ ಲಿಂಗದಹಳ್ಳಿ ಪೊಲೀಸ್ ಠಾಣೆಗೆ ಸೇರಿದ ಕೆಲವೊಂದು ಗ್ರಾಮಗಳು ಚಿಕ್ಕಮಗಳೂರು ಕಂದಾಯ ತಾಲ್ಲೂಕಿನ ವ್ಯಾಪ್ತಿಯಲ್ಲಿದ್ದು, ಸದರಿ ಗ್ರಾಮಗಳ ಜನರು ತಮ್ಮ ಎಲ್ಲಾ ಕೆಲಸ ಕಾರ್ಯಗಳಿಗೆ ಚಿಕ್ಕಮಗಳೂರು ನಗರವನ್ನೇ ಅವಲಂಬಿಸಿದ್ದು, ಈ ಗ್ರಾಮದ ಜನರು ಪೊಲೀಸ್ ವೃತ್ತ ನಿರೀಕ್ಷಕರನ್ನು ಅಥವಾ ಪೊಲೀಸ್ ಉಪಾಧೀಕ್ಷಕರನ್ನು ಭೇಟಿ ಮಾಡಲು ಸುಮಾರು 40 ಕಿ.ಮೀ. ದೂರ ಇರುವ ತರೀಕೆರೆಗೆ ಹೋಗಬೇಕಾಗಿರುತ್ತದೆ. ಆದ್ದರಿಂದ, ಸಾರ್ವಜನಿಕರ ಅನುಕೂಲದ ದೃಷ್ಟಿಯಿಂದ ಕೆಳಕಂಡ 10 ಗ್ರಾಮಗಳನ್ನು ಲಿಂಗದಹಳ್ಳಿ ಪೊಲೀಸ್ ಠಾಣಾ ವ್ಯಾಪ್ತಿಯಿಂದ ಬೇರ್ಪಡಿಸಿ, ಚಿಕ್ಕಮಗಳೂರು ಗ್ರಾಮಾಂತರ ಪೊಲೀಸ್ ಠಾಣೆಯ ವ್ಯಾಪ್ತಿಗೆ ಸೇರಿಸಲು ಹಾಗೂ ಚಿಕ್ಕಮಗಳೂರು ಉಪವಿಭಾಗದ, ಚಿಕ್ಕಮಗಳೂರು ಗ್ರಾಮಾಂತರ ವೃತ್ತ ವ್ಯಾಪ್ತಿಯ ಮಲ್ಲಂದೂರು ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿರುವ ಅತ್ತಿಗುಂಡಿಯ ಮಹಲ್ ಗ್ರಾಮವನ್ನು ಚಿಕ್ಕಮಗಳೂರು ಗ್ರಾಮಾಂತರ ಪೊಲೀಸ್ ಠಾಣೆಯ ವ್ಯಾಪ್ತಿಗೆ ಸೇರಿಸಿ ಸರ್ಕಾರದ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

| ಕ್ರ. ಸಂ. | ಗ್ರಾಮದ ಹೆಸರು | ಪ್ರಸ್ತುತ ಇರುವ ಪೊಲೀಸ್ ಠಾಣೆ | ಯಾವ ಪೊಲೀಸ್ ಠಾಣೆಗೆ ಸೇರಿಸಬೇಕು |
|---|---|---|---|
| 1. | ಶಿವಪುರ | ಲಿಂಗದಹಳ್ಳಿ ಠಾಣೆ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ |
| 2. | ತೊಗರಿಹಂಕಲ್ | ಲಿಂಗದಹಳ್ಳಿ ಠಾಣೆ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ |
| 3. | ಹೊಸಪೇಟೆ | ಲಿಂಗದಹಳ್ಳಿ ಠಾಣೆ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ |
| 4. | ಗುಡ್ಡೇನಹಳ್ಳಿ | ಲಿಂಗದಹಳ್ಳಿ ಠಾಣೆ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ |
| 5. | ಕಂಬಿಹಳ್ಳಿ | ಲಿಂಗದಹಳ್ಳಿ ಠಾಣೆ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ |
| 6. | ಶಾಂತಿಪುರ | ಲಿಂಗದಹಳ್ಳಿ ಠಾಣೆ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ |

| | | | |
|---|---|---|---|
| 7. | ಅತ್ತಿಗಿರಿ | ಲಿಂಗದಹಳ್ಳಿ ಠಾಣೆ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ |
| 8. | ಹಿರೇಬಿದರೆ | ಲಿಂಗದಹಳ್ಳಿ ಠಾಣೆ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ |
| 9. | ಅರವಿಂದನಗರ | ಲಿಂಗದಹಳ್ಳಿ ಠಾಣೆ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ |
| 10. | ಗೋಣಕಲ್ | ಲಿಂಗದಹಳ್ಳಿ ಠಾಣೆ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ |
| 11. | ಅತ್ತಿಗುಂಡಿ ಮಹಲ್ | ಮಲ್ಲಂದೂರು ಠಾಣೆ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ |

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 76 ಪಿಓಪಿ 2015, ಬೆಂಗಳೂರು, ದಿನಾಂಕ: 25.2.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ಉಪವಿಭಾಗದ ತರೀಕೆರೆ ಗ್ರಾಮಾಂತರ ವೃತ್ತದ ಲಿಂಗದಹಳ್ಳಿ ಪೊಲೀಸ್ ಠಾಣೆಗೆ ಸೇರಿದ ಕೆಳಕಂಡ ಗ್ರಾಮಗಳು ಹಾಗೂ ಚಿಕ್ಕಮಗಳೂರು ಉಪವಿಭಾಗದ, ಚಿಕ್ಕಮಗಳೂರು ಗ್ರಾಮಾಂತರ ವೃತ್ತ ವ್ಯಾಪ್ತಿಯ ಮಲ್ಲಂದೂರು ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿರುವ ಅತ್ತಿಗುಂಡಿಯ ಮಹಲ್ ಗ್ರಾಮವನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಚಿಕ್ಕಮಗಳೂರು ಗ್ರಾಮಾಂತರ ಪೊಲೀಸ್ ಠಾಣೆಯ ವ್ಯಾಪ್ತಿಗೆ ಸೇರಿಸಲು ಸರ್ಕಾರದ ಅನುಮೋದನೆಯನ್ನು ನೀಡಿದೆ.

| ಕ್ರ. ಸಂ. | ಗ್ರಾಮದ ಹೆಸರು | ಪ್ರಸ್ತುತ ಇರುವ ಪೊಲೀಸ್ ಠಾಣೆ | ಯಾವ ಪೊಲೀಸ್ ಠಾಣೆಗೆ ಸೇರಿಸಬೇಕು |
|---|---|---|---|
| 1. | ಶಿವಪುರ | ಲಿಂಗದಹಳ್ಳಿ ಠಾಣೆ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ |
| 2. | ತೊಗರಿಹಂಕಲ್ | ಲಿಂಗದಹಳ್ಳಿ ಠಾಣೆ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ |
| 3. | ಹೊಸಪೇಟೆ | ಲಿಂಗದಹಳ್ಳಿ ಠಾಣೆ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ |
| 4. | ಗುಡ್ಡೇನಹಳ್ಳಿ | ಲಿಂಗದಹಳ್ಳಿ ಠಾಣೆ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ |
| 5. | ಕಂಬಿಹಳ್ಳಿ | ಲಿಂಗದಹಳ್ಳಿ ಠಾಣೆ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ |
| 6. | ಶಾಂತಿಪುರ | ಲಿಂಗದಹಳ್ಳಿ ಠಾಣೆ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ |
| 7. | ಅತ್ತಿಗಿರಿ | ಲಿಂಗದಹಳ್ಳಿ ಠಾಣೆ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ |
| 8. | ಹಿರೇಬಿದರೆ | ಲಿಂಗದಹಳ್ಳಿ ಠಾಣೆ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ |
| 9. | ಅರವಿಂದನಗರ | ಲಿಂಗದಹಳ್ಳಿ ಠಾಣೆ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ |
| 10. | ಗೋಣಕಲ್ | ಲಿಂಗದಹಳ್ಳಿ ಠಾಣೆ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ |
| 11. | ಅತ್ತಿಗುಂಡಿ ಮಹಲ್ | ಮಲ್ಲಂದೂರು ಠಾಣೆ | ಚಿಕ್ಕಮಗಳೂರು ಗ್ರಾಮಾಂತರ ಠಾಣೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್.ಪುಟ್ಟೇಗೌಡ**

**PR. 232**
**SC. 50**

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ).

## ಇಂಧನ ಸಚಿವಾಲಯ

**ವಿಷಯ** : ವಿದ್ಯುತ್ ಪರಿವೀಕ್ಷಣಾ ಇಲಾಖೆಯಲ್ಲಿ ಹೊಸದಾಗಿ ಸೃಜನೆಗೊಂಡ ಹುದ್ದೆಗಳು ಸೇರಿದಂತೆ ಒಟ್ಟು ವೃಂದ ಬಲವನ್ನು ವಿವಿಧ ಕಚೇರಿಗಳಿಗೆ ಹಂಚಿಕೆಗೊಳಿಸುವ ಬಗ್ಗೆ.

**ಓದಲಾಗಿದೆ**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 151 ಇಬಿಎಸ್ 2012 ದಿನಾಂಕ: 21.06.2013.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 151 ಇಬಿಎಸ್ 2012 (ಭಾಗ-1) ದಿನಾಂಕ: 19.07.2014.
3. ಮುವಿಪ ರವರ ಪತ್ರ ಸಂಖ್ಯೆ: ಮುವಿಪ/ಸಿಸ1/2825/14-15 ದಿನಾಂಕ: 24.12.2014.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ವಿದ್ಯುತ್ ಪರಿವೀಕ್ಷಣಾ ಇಲಾಖೆಯಲ್ಲಿ ಹೊಸದಾಗಿ ತಾಂತ್ರಿಕ ಹುದ್ದೆಗಳು ಹಾಗೂ ತಾಂತ್ರಿಕೇತರ ಹುದ್ದೆಗಳನ್ನು ಸೃಜಿಸಿರುವ ಹಿನ್ನಲೆಯಲ್ಲಿ ಸಾರ್ವಜನಿಕರಿಗೆ ಅನುಕೂಲವಾಗುವಂತೆ ಮತ್ತು ಕಚೇರಿ ಕೆಲಸಗಳಿಗೆ ಅನುಗುಣವಾಗಿ ಇಲಾಖೆಯನ್ನು ಪುನರ್ ವಿಂಗಡಣೆಗೊಳಿಸಿ ಕಚೇರಿಗಳ ಪುನರ್ ವ್ಯವಸ್ಥೆಯಡಿಯಲ್ಲಿ ಹುದ್ದೆಗಳನ್ನು ಹಂಚಿಕೆಗೊಳಿಸಿ ಆದೇಶ ಹೊರಡಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಮಂಗಳೂರು ನಗರವು ಅತೀ ವೇಗದಲ್ಲಿ ಬೆಳೆಯುತ್ತಿದ್ದು, ರಾಷ್ಟ್ರೀಯ ವಿಮಾನ ನಿಲ್ದಾಣ, ಮಂಗಳೂರು-ಮುಂಬೈ, ಕೊಂಕಣ ರೈಲ್ವೆ ಹಾಗೂ ಕೇರಳ-ಬೆಂಗಳೂರು ಕಡೆ ರೈಲ್ವೆ ಸಂಪರ್ಕ ಇತ್ಯಾದಿಗಳು ಶೀಘ್ರವಾಗಿ ಬೆಳೆಯುತ್ತಿರುವುದರಿಂದ ಹಾಗೂ ಭಾರತದ ಸಂವಿಧಾನ ಅನುಚ್ಛೇದ 371 (ಜೆ) (2) (ಬಿ) ರನ್ವಯ ಹೈದ್ರಾಬಾದ್-ಕರ್ನಾಟಕ ಪ್ರದೇಶದ ಕಲಬುರ್ಗಿ ವಿದ್ಯುತ್ ಸರಬರಾಜು ಸಂಸ್ಥೆಗೆ ತಲಾ ಒಂದು ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಯನ್ನು ಮಂಗಳೂರು ಹಾಗೂ ಕಲಬುರಗಿ ಜಿಲ್ಲೆಯಲ್ಲಿ ಹೊಸದಾಗಿ ಸೃಜಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ವಿದ್ಯುತ್ ಪರಿವೀಕ್ಷಣಾ ಇಲಾಖೆಯಲ್ಲಿ ಹೊಸದಾಗಿ ಸೃಜಿಸಲಾದ ಮಂಗಳೂರು ಹಾಗೂ ಕಲಬುರಗಿ ಜಿಲ್ಲೆಗಳ ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಗಳು ಸೇರಿ ಒಟ್ಟು 6 ಹುದ್ದೆಗಳನ್ನು ಸೃಜಿಸಿದ ಹಿನ್ನಲೆಯಲ್ಲಿ ಒಟ್ಟು ವೃಂದ ಬಲದೊಂದಿಗೆ ಸೇರಿಸಿ ವಿವಿಧ ಕಚೇರಿಗಳಿಗೆ ಹಂಚಿಕೆಗೊಳಿಸುವಂತೆ ಮುಖ್ಯ ವಿದ್ಯುತ್ ಪರಿವೀಕ್ಷಕರು ಪರಿಷ್ಕೃತ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

ಮುಖ್ಯ ವಿದ್ಯುತ್ ಪರಿವೀಕ್ಷಕರು ದಿನಾಂಕ: 24.12.2014 ರ ಪತ್ರದಲ್ಲಿ ಸಲ್ಲಿಸಿರುವ ಪ್ರಸ್ತಾವನೆಯನ್ನು ವಿವರವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ:-

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 151 ಇಬಿಎಸ್ 2012 (ಭಾಗ-1) ಬೆಂಗಳೂರು, ದಿನಾಂಕ: 10.02.2015.**

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ವಿದ್ಯುತ್ ಪರಿವೀಕ್ಷಣಾ ಇಲಾಖೆಯಲ್ಲಿ ಹೊಸದಾಗಿ 2 ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಗಳಿಗೆ ಮಂಗಳೂರು ಮತ್ತು ಕಲಬುರಗಿ ಜಿಲ್ಲೆಗಳಲ್ಲಿ ಕಚೇರಿಗಳನ್ನು ತೆರೆಯಲಾಗಿದ್ದು, ಸದರಿ ಕಚೇರಿಗಳಿಗೆ ಸಾರ್ವಜನಿಕರಿಗೆ

ಅನುಕೂಲವಾಗುವಂತೆ ಮತ್ತು ಕಛೇರಿ ಕೆಲಸಗಳಿಗೆ ಅನುಗುಣವಾಗಿ ಇಲಾಖೆಯನ್ನು ಪುನರ್ ವಿಂಗಡಣೆಗೊಳಿಸಿ ಕಛೇರಿಗಳ ಪುನರ್ ವ್ಯವಸ್ಥೆಯಡಿಯಲ್ಲಿ ಹುದ್ದೆಗಳನ್ನು ಹಂಚಿಕೆಗೊಳಿಸಿ ಈ ಕೆಳಕಂಡ ಅನುಬಂಧಗಳಲ್ಲಿ ವಿವರಣೆಗಳನ್ನು ಇಂದೀಕರಿಸಿ ನಮೂದಿಸಿ ಆದೇಶಿಸಲಾಗಿದೆ.

**(1)** ಅನುಬಂಧ–1 – ಪುನರ್ ವ್ಯವಸ್ಥೆಯ ನಂತರ ಕಾರ್ಯನಿರ್ವಹಿಸುವ ಕಚೇರಿಗಳ ವಿವರ ಮತ್ತು ಅವುಗಳ ಕಾರ್ಯಸ್ಥಾನ.

**(2)** ಅನುಬಂಧ–2 – ಪುನರ್ ವಿಂಗಡಣೆ ನಂತರ ಚಾಲ್ತಿಗೆ ಬರಬೇಕಾದ ಕಚೇರಿವಾರು ಕಚೇರಿಯ ಮುಖ್ಯಾಧಿಕಾರಿಗಳು, ಅಧಿಕಾರಿಗಳು ಮತ್ತು ಸಿಬ್ಬಂದಿ ವಿವರಗಳು.

**(3)** ಹೊರಗುತ್ತಿಗೆ ಆಧಾರದ ಮೇಲೆ ಮಂಜೂರಾಗಿರುವ ಹುದ್ದೆಗಳನ್ನು ಮಂಜೂರಾತಿಗೆ ಮೀರದಂತೆ ಅತ್ಯವಶ್ಯವಿರುವ ಸಂಬಂಧಿಸಿದ ಕಚೇರಿಗಳಿಗೆ ಮರುಹಂಚಿಕೆಗೊಳಿಸುವ ಅಧಿಕಾರಿವನ್ನು ಮುಖ್ಯ ವಿದ್ಯುತ್ ಪರಿವೀಕ್ಷಕರಿಗೆ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಮೀರ್ ಮಡಿಮನ್**
ಪೀಠಾಧಿಕಾರಿ, (ವಿದ್ಯುತ್‌ಚ್ಛಕ್ತಿ)
ಇಂಧನ ಇಲಾಖೆ.

**ಅನುಬಂಧ–1 ಸರ್ಕಾರಿ ಆದೇಶ ಸಂಖ್ಯೆ ಇಎನ್ 151 ಇಬಿಎಸ್ 2012 (ಭಾಗ–1) ದಿನಾಂಕ: 10.02.2015**

ಪುನರ್ ವ್ಯವಸ್ಥೆಯ ನಂತರ ಕಾರ್ಯ ನಿರ್ವಹಿಸುವ ಕಛೇರಿಗಳ ವಿವರ ಮತ್ತು ಅವುಗಳ ಕಾರ್ಯ ಸ್ಥಾನ

| ಕ್ರಸಂ | ಕಛೇರಿಯ ಹೆಸರು | ಕಾರ್ಯ ಸ್ಥಾನ |
|---|---|---|
| 1 | ಮುಖ್ಯ ವಿದ್ಯುತ್ ಪರಿವೀಕ್ಷಕರು, ಕೇಂದ್ರ ಕಚೇರಿ, ಬೆಂಗಳೂರು | ಬೆಂಗಳೂರು |
| 2 | ಹೆಚ್ಚುವರಿ ಮುಖ್ಯ ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಉತ್ತರ | ಬೆಂಗಳೂರು |
| 3 | ಹೆಚ್ಚುವರಿ ಮುಖ್ಯ ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ದಕ್ಷಿಣ | ಬೆಂಗಳೂರು |
| 4 | ಹೆಚ್ಚುವರಿ ಮುಖ್ಯ ವಿದ್ಯುತ್ ಪರಿವೀಕ್ಷಕರು, ಮೈಸೂರು | ಮೈಸೂರು |
| 5 | ಹೆಚ್ಚುವರಿ ಮುಖ್ಯ ವಿದ್ಯುತ್ ಪರಿವೀಕ್ಷಕರು, ಧಾರವಾಡ | ಧಾರವಾಡ |
| 6 | ಹೆಚ್ಚುವರಿ ಮುಖ್ಯ ವಿದ್ಯುತ್ ಪರಿವೀಕ್ಷಕರು, ಮಂಗಳೂರು | ಮಂಗಳೂರು |
| 7 | ಹೆಚ್ಚುವರಿ ಮುಖ್ಯ ವಿದ್ಯುತ್ ಪರಿವೀಕ್ಷಕರು, ಕಲಬುರಗಿ | ಕಲಬುರಗಿ |
| 8 | ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಹೆಚ್ಚುವರಿ ಉತ್ತರ | ಬೆಂಗಳೂರು |
| 9 | ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಪೂರ್ವ | ಬೆಂಗಳೂರು |
| 10 | ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಹೆಚ್ಚುವರಿ ಪೂರ್ವ | ಬೆಂಗಳೂರು |
| 11 | ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರು, ಚಿತ್ರದುರ್ಗ | ಚಿತ್ರದುರ್ಗ |
| 12 | ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಹೆಚ್ಚುವರಿ ದಕ್ಷಿಣ | ಬೆಂಗಳೂರು |
| 13 | ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಪಶ್ಚಿಮ | ಬೆಂಗಳೂರು |
| 14 | ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಹೆಚ್ಚುವರಿ ಪಶ್ಚಿಮ | ಬೆಂಗಳೂರು |
| 15 | ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರು, ಬೆಳಗಾವಿ | ಬೆಳಗಾವಿ |
| 16 | ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರು, ಬಳ್ಳಾರಿ | ಬಳ್ಳಾರಿ |
| 17 | ವಿದ್ಯುತ್ ಪರಿವೀಕ್ಷಕರು, ದಾವಣಗೆರೆ | ದಾವಣಗೆರೆ |
| 18 | ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ದಕ್ಷಿಣ | ಬೆಂಗಳೂರು |
| 19 | ವಿದ್ಯುತ್ ಪರಿವೀಕ್ಷಕರು, ಹಾಸನ | ಹಾಸನ |
| 20 | ವಿದ್ಯುತ್ ಪರಿವೀಕ್ಷಕರು, ಉಡುಪಿ | ಉಡುಪಿ |
| 21 | ವಿದ್ಯುತ್ ಪರಿವೀಕ್ಷಕರು, ಶಿವಮೊಗ್ಗ | ಶಿವಮೊಗ್ಗ |
| 22 | ವಿದ್ಯುತ್ ಪರಿವೀಕ್ಷಕರು, ಶಿರಸಿ | ಶಿರಸಿ |
| 23 | ವಿದ್ಯುತ್ ಪರಿವೀಕ್ಷಕರು, ವಿಜಯಾಪುರ | ವಿಜಯಾಪುರ |
| 24 | ವಿದ್ಯುತ್ ಪರಿವೀಕ್ಷಕರು, ರಾಯಚೂರು | ರಾಯಚೂರು |
| 25 | ಉಪ ವಿದ್ಯುತ್ ಪರಿವೀಕ್ಷಕರು, ಕೋಲಾರ | ಕೋಲಾರ |
| 26 | ಉಪ ವಿದ್ಯುತ್ ಪರಿವೀಕ್ಷಕರು, ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ |
| 27 | ಉಪ ವಿದ್ಯುತ್ ಪರಿವೀಕ್ಷಕರು, ತುಮಕೂರು | ತುಮಕೂರು |
| 28 | ಉಪ ವಿದ್ಯುತ್ ಪರಿವೀಕ್ಷಕರು, ರಾಮನಗರ | ರಾಮನಗರ |
| 29 | ಉಪ ವಿದ್ಯುತ್ ಪರಿವೀಕ್ಷಕರು, ಮಂಡ್ಯ | ಮಂಡ್ಯ |
| 30 | ಉಪ ವಿದ್ಯುತ್ ಪರಿವೀಕ್ಷಕರು, ಚಾಮರಾಜನಗರ | ಚಾಮರಾಜನಗರ |
| 31 | ಉಪ ವಿದ್ಯುತ್ ಪರಿವೀಕ್ಷಕರು, ಮಡಿಕೇರಿ | ಮಡಿಕೇರಿ |
| 32 | ಉಪ ವಿದ್ಯುತ್ ಪರಿವೀಕ್ಷಕರು, ಚಿಕ್ಕಮಗಳೂರು | ಚಿಕ್ಕಮಗಳೂರು |
| 33 | ಉಪ ವಿದ್ಯುತ್ ಪರಿವೀಕ್ಷಕರು, ಗದಗ | ಗದಗ |
| 34 | ಉಪ ವಿದ್ಯುತ್ ಪರಿವೀಕ್ಷಕರು, ಹಾವೇರಿ | ಹಾವೇರಿ |
| 35 | ಉಪ ವಿದ್ಯುತ್ ಪರಿವೀಕ್ಷಕರು, ಬಾಗಲಕೋಟೆ | ಬಾಗಲಕೋಟೆ |
| 36 | ಉಪ ವಿದ್ಯುತ್ ಪರಿವೀಕ್ಷಕರು, ಬೀದರ್ | ಬೀದರ್ |
| 37 | ಉಪ ವಿದ್ಯುತ್ ಪರಿವೀಕ್ಷಕರು, ಯಾದಗಿರಿ | ಯಾದಗಿರಿ |
| 38 | ಉಪ ವಿದ್ಯುತ್ ಪರಿವೀಕ್ಷಕರು, ಕೊಪ್ಪಳ | ಕೊಪ್ಪಳ |

## ಅನುಬಂಧ–2

### ಸರ್ಕಾರಿ ಆದೇಶ ಸಂ. ಇಎನ್ 151 ಇಬಿಎಸ್ 2012 (ಭಾಗ–1) ದಿನಾಂಕ: 10.02.2015

### ವಿದ್ಯುತ್ ಪರಿವೀಕ್ಷಣಾಲಯ ಇಲಾಖಾ ಕಚೇರಿಗಳನ್ನು ಪುನರ್ ವಿಂಗಡನೆ ನಂತರ ಚಾಲ್ತಿಗೆ ಬರಬೇಕಾದ ಕಛೇರಿವಾರು, ಕಛೇರಿಯ ಮುಖ್ಯಾಧಿಕಾರಿಗಳು, ಅಧಿಕಾರಿಗಳು ಮತ್ತು ಸಿಬ್ಬಂದಿ ವಿವರಗಳು

| ಕ್ರಸಂ. | ವೃತ್ತ | ಕಚೇರಿಗಳ ಸಂಖ್ಯೆ | ಕಛೇರಿಯ ಮುಖ್ಯಾಧಿಕಾರಿಗಳು | ಕಛೇರಿ | ಮುವಿಪ | ಹೆಮುವಿಪ | ಉಮುವಿಪ | ವಿಪ | ಉವಿಪ | ಸವಿಪ(ಕಚೇರಿ) | ಸವಿಪ (ಕ್ಷೇತ್ರೀಯ) | ಹಿರಿಯ ಲೆಕ್ಕಾಧಿಕಾರಿ | ಲೆಕ್ಕಾಧಿಕಾರಿ | ಲೀಗಲ್ ಆಫೀಸರ್ | ವ್ಯವಸ್ಥಾಪಕರು | ಅಧೀಕ್ಷಕರು | ಪ್ರ.ದ.ಸ | ಶೀಘ್ರಲಿಪಿಗಾರರು | ದ್ವಿ.ದ.ಸ | ಬೆರಳಚ್ಚುಗಾರರು | ಕಂಪ್ಯೂಟರ್ ಆಪರೇಟರ್ | ಹಿರಿಯ ಚಾಲಕರು | ಚಾಲಕರು | ದಫೇದಾರರು | ಸಹಾಯಕರು | ಜವಾನರು | ರಾತ್ರಿ ಕಾವಲುಗಾರರು | ಡಿ.ಎಂ.ಓ | ಒಟ್ಟು |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| 1 | ಬೆಂಗಳೂರು | 1 | ಮುವಿಪ | ಕೇಂದ್ರ ಕಚೇರಿ | 1 | 1 | 0 | 3 | 1 | 5 | 0 | 1 | 1 | 1 | 2 | 2 | 10 | 2 | 12 | 2 | 5 | 0 | 1 | 2 | 2 | 5 | 1 | 1 | 61 |
| | ಕೇಂದ್ರ ಕಚೇರಿ | 1 | | | | | | | | | | | | | | | | | | | | | | | | | | | |
| 2 | ಬೆಂಗಳೂರು | 1 | ಹೆಮುವಿಪ | ಬೆಂ ಉತ್ತರ | 0 | 1 | 1 | 1 | 1 | 2 | 3 | 0 | 1 | 0 | 1 | 2 | 2 | 1 | 2 | 0 | 0 | 1 | 0 | 0 | 1 | 1 | 0 | 0 | 21 |
| 3 | ಬೆಂಗಳೂರು | 2 | ಹೆಮುವಿಪ | ಬೆಂ ದಕ್ಷಿಣ | 0 | 1 | 1 | 0 | 0 | 2 | 0 | 0 | 1 | 0 | 1 | 2 | 2 | 1 | 2 | 0 | 0 | 0 | 1 | 0 | 1 | 1 | 0 | 0 | 16 |
| 4 | ಮೈಸೂರು | 3 | ಹೆಮುವಿಪ | ಮೈಸೂರು | 0 | 1 | 1 | 2 | 2 | 2 | 4 | 0 | 0 | 0 | 1 | 2 | 2 | 1 | 2 | 0 | 0 | 0 | 1 | 0 | 1 | 1 | 0 | 0 | 23 |
| 5 | ಧಾರವಾಡ | 4 | ಹೆಮುವಿಪ | ಧಾರವಾಡ | 0 | 1 | 1 | 1 | 1 | 2 | 2 | 0 | 0 | 0 | 1 | 2 | 2 | 1 | 2 | 0 | 0 | 0 | 1 | 0 | 1 | 1 | 0 | 0 | 19 |
| 6 | ಮಂಗಳೂರು | 5 | ಹೆಮುವಿಪ | ಮಂಗಳೂರು | 0 | 1 | 1 | 1 | 2 | 1 | 4 | 0 | 0 | 0 | 1* | 1 | 1 | 1 | 2* | 0 | 0 | 0 | 0 | 0 | 1 | 1 | 0 | 0 | 18 |
| 7 | ಕಲಬುರಗಿ | 6 | ಹೆಮುವಿಪ | ಕಲಬುರಗಿ | 0 | 1 | 1 | 1 | 1 | 1 | 2 | 0 | 0 | 0 | 1* | 1 | 1 | 1 | 2* | 0 | 0 | 1 | 0 | 0 | 0 | 1 | 0 | 0 | 15 |
| | ಹೆಮುವಿಪ | 6 | | | | | | | | | | | | | | | | | | | | | | | | | | | |
| 8 | ಬೆಂಗಳೂರು | 1 | ಉಮುವಿಪ | ಬೆಂ.ಹೆಚ್ಚುವರಿ ಉತ್ತರ | 0 | 0 | 1 | 1 | 1 | 1 | 3 | 0 | 0 | 0 | 0 | 1 | 1 | 0 | 2 | 0 | 1 | 0 | 1 | 0 | 1 | 1 | 0 | 0 | 15 |
| 9 | ಬೆಂಗಳೂರು | 2 | ಉಮುವಿಪ | ಬೆಂ ಪೂರ್ವ | 0 | 0 | 1 | 1 | 1 | 1 | 3 | 0 | 0 | 0 | 0 | 1 | 1 | 0 | 2 | 0 | 1 | 0 | 1 | 0 | 1 | 1 | 0 | 0 | 15 |
| 10 | ಬೆಂಗಳೂರು | 3 | ಉಮುವಿಪ | ಬೆಂ ಹೆಚ್ಚುವರಿ ಪೂರ್ವ | 0 | 0 | 1 | 1 | 1 | 1 | 3 | 0 | 0 | 0 | 0 | 1 | 1 | 0 | 2 | 0 | 1 | 0 | 0 | 0 | 1 | 1 | 0 | 0 | 14 |
| 11 | ಚಿತ್ರದುರ್ಗ | 4 | ಉಮುವಿಪ | ಚಿತ್ರದುರ್ಗ | 0 | 0 | 1 | 0 | 1 | 1 | 2 | 0 | 0 | 0 | 0 | 1 | 1 | 0 | 1 | 0 | 1 | 0 | 0 | 0 | 1 | 1 | 0 | 0 | 11 |
| 12 | ಬೆಂಗಳೂರು | 5 | ಉಮುವಿಪ | ಬೆಂ ಹೆಚ್ಚುವರಿ ದಕ್ಷಿಣ | 0 | 0 | 1 | 1 | 1 | 1 | 3 | 0 | 0 | 0 | 0 | 1 | 1 | 0 | 2 | 0 | 1 | 0 | 0 | 0 | 1 | 1 | 0 | 0 | 14 |
| 13 | ಬೆಂಗಳೂರು | 6 | ಉಮುವಿಪ | ಬೆಂ ಪಶ್ಚಿಮ | 0 | 0 | 1 | 1 | 1 | 1 | 2 | 0 | 0 | 0 | 0 | 1 | 1 | 0 | 2 | 0 | 1 | 0 | 0 | 0 | 1 | 1 | 0 | 0 | 13 |
| 14 | ಬೆಂಗಳೂರು | 7 | ಉಮುವಿಪ | ಬೆಂ ಹೆಚ್ಚುವರಿ ಪಶ್ಚಿಮ | 0 | 0 | 1 | 1 | 1 | 1 | 2 | 0 | 0 | 0 | 0 | 1 | 1 | 0 | 2 | 0 | 1 | 0 | 1 | 0 | 1 | 1 | 0 | 0 | 14 |
| 15 | ಬೆಳಗಾವಿ | 8 | ಉಮುವಿಪ | ಬೆಳಗಾವಿ | 0 | 0 | 1 | 1 | 2 | 1 | 4 | 0 | 0 | 0 | 0 | 1 | 1 | 0 | 1 | 0 | 1 | 0 | 0 | 0 | 1 | 1 | 0 | 0 | 15 |
| 16 | ಬಳ್ಳಾರಿ | 9 | ಉಮುವಿಪ | ಬಳ್ಳಾರಿ | 0 | 0 | 1 | 1 | 1 | 1 | 2 | 0 | 0 | 0 | 0 | 1 | 1 | 0 | 1 | 0 | 1 | 0 | 1 | 0 | 1 | 1 | 0 | 0 | 13 |
| | ಉಮುವಿಪ | 9 | | | | | | | | | | | | | | | | | | | | | | | | | | | |
| 17 | ದಾವಣಗೆರೆ | 1 | ವಿಪ | ದಾವಣಗೆರೆ | 0 | 0 | 0 | 1 | 1 | 1 | 1 | 0 | 0 | 0 | 0 | 0 | 1 | 0 | 1 | 0 | 0 | 0 | 0 | 0 | 1 | 1 | 0 | 0 | 8 |
| 18 | ಬೆಂಗಳೂರು | 2 | ವಿಪ | ಬೆಂ. ದಕ್ಷಿಣ | 0 | 0 | 0 | 1 | 2 | 1 | 6 | 0 | 0 | 0 | 0 | 0 | 1 | 0 | 1 | 0 | 0 | 0 | 0 | 0 | 0 | 1 | 0 | 0 | 13 |

| | | | | | | | | | | | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| 19 | **ಹಾಸನ** | **3** | ವಿಪ | ಹಾಸನ | 0 | 0 | 0 | 1 | 1 | 1 | 2 | 0 | 0 | 0 | 0 | 0 | 1 | 0 | 1 | 0 | 0 | 0 | 0 | 0 | 0 | 1 | 0 | 0 | **8** |
| 20 | **ಉಡುಪಿ** | **4** | ವಿಪ | ಉಡುಪಿ | 0 | 0 | 0 | 1 | 1 | 1 | 1 | 0 | 0 | 0 | 0 | 0 | 1 | 0 | 1 | 0 | 0 | 0 | 0 | 0 | 0 | 1 | 0 | 0 | **7** |
| 21 | **ಶಿವಮೊಗ್ಗ** | **5** | ವಿಪ | ಶಿವಮೊಗ್ಗ | 0 | 0 | 0 | 1 | 1 | 1 | 2 | 0 | 0 | 0 | 0 | 0 | 1 | 0 | 1 | 0 | 0 | 0 | 1 | 0 | 1 | 1 | 0 | 0 | **10** |
| 22 | **ವಿಜಯಾಪುರ** | **6** | ವಿಪ | ವಿಜಯಾಪುರ | 0 | 0 | 0 | 1 | 1 | 1 | 1 | 0 | 0 | 0 | 0 | 0 | 1 | 0 | 1 | 0 | 0 | 0 | 0 | 0 | 1 | 1 | 0 | 0 | **8** |
| 23 | **ಶಿರಸಿ** | **7** | ವಿಪ | ಶಿರಸಿ | 0 | 0 | 0 | 1 | 1 | 1 | 1 | 0 | 0 | 0 | 0 | 0 | 1 | 0 | 1 | 0 | 0 | 0 | 0 | 0 | 1 | 1 | 0 | 0 | **8** |
| 24 | **ರಾಯಚೂರು** | **8** | ವಿಪ | ರಾಯಚೂರು | 0 | 0 | 0 | 1 | 1 | 1 | 1 | 0 | 0 | 0 | 0 | 0 | 1 | 0 | 1 | 0 | 0 | 0 | 0 | 0 | 1 | 1 | 0 | 0 | **8** |
| | **ವಿಪ** | **8** | | | | | | | | | | | | | | | | | | | | | | | | | | | |
| 25 | **ಕೋಲಾರ** | **1** | ಉವಿಪ | ಕೋಲಾರ | 0 | 0 | 0 | 0 | 1 | 0 | 2 | 0 | 0 | 0 | 0 | 0 | 1 | 0 | 1 | 0 | 0 | 0 | 0 | 0 | 1 | 1 | 0 | 0 | **7** |
| 26 | **ಚಿಕ್ಕಬಳ್ಳಾಪುರ** | **2** | ಉವಿಪ | ಚಿಕ್ಕಬಳ್ಳಾಪುರ | 0 | 0 | 0 | 0 | 1 | 0 | 1 | 0 | 0 | 0 | 0 | 0 | 1 | 0 | 1 | 0 | 0 | 0 | 0 | 0 | 1 | 1 | 0 | 0 | **6** |
| 27 | **ತುಮಕೂರು** | **3** | ಉವಿಪ | ತುಮಕೂರು | 0 | 0 | 0 | 0 | 1 | 0 | 3 | 0 | 0 | 0 | 0 | 0 | 1 | 0 | 1 | 0 | 0 | 0 | 0 | 0 | 1 | 1 | 0 | 0 | **8** |
| 28 | **ರಾಮನಗರ** | **4** | ಉವಿಪ | ರಾಮನಗರ | 0 | 0 | 0 | 0 | 1 | 0 | 1 | 0 | 0 | 0 | 0 | 0 | 1 | 0 | 1 | 1 | 0 | 0 | 0 | 0 | 0 | 1 | 0 | 0 | **6** |
| 29 | **ಚಿಕ್ಕಮಗಳೂರು** | **5** | ಉವಿಪ | ಚಿಕ್ಕಮಗಳೂರು | 0 | 0 | 0 | 0 | 1 | 0 | 2 | 0 | 0 | 0 | 0 | 0 | 1 | 0 | 1 | 0 | 0 | 0 | 0 | 0 | 0 | 1 | 0 | 0 | **6** |
| 30 | **ಮಂಡ್ಯ** | **6** | ಉವಿಪ | ಮಂಡ್ಯ | 0 | 0 | 0 | 0 | 1 | 0 | 2 | 0 | 0 | 0 | 0 | 0 | 1 | 0 | 1 | 0 | 0 | 0 | 0 | 0 | 1 | 1 | 0 | 0 | **7** |
| 31 | **ಚಾಮರಾಜ ನಗರ** | **7** | ಉವಿಪ | ಚಾಮರಾಜನಗರ | 0 | 0 | 0 | 0 | 1 | 0 | 1 | 0 | 0 | 0 | 0 | 0 | 1 | 0 | 1 | 0 | 0 | 0 | 0 | 0 | 0 | 1 | 0 | 0 | **5** |
| 32 | **ಮಡಿಕೇರಿ** | **8** | ಉವಿಪ | ಮಡಿಕೇರಿ | 0 | 0 | 0 | 0 | 1 | 0 | 1 | 0 | 0 | 0 | 0 | 0 | 1 | 0 | 1 | 0 | 0 | 0 | 0 | 0 | 0 | 1 | 0 | 0 | **5** |
| 33 | **ಗದಗ** | **9** | ಉವಿಪ | ಗದಗ | 0 | 0 | 0 | 0 | 1 | 0 | 1 | 0 | 0 | 0 | 0 | 0 | 1 | 0 | 1 | 0 | 0 | 0 | 0 | 0 | 0 | 1 | 0 | 0 | **5** |
| 34 | **ಹಾವೇರಿ** | **10** | ಉವಿಪ | ಹಾವೇರಿ | 0 | 0 | 0 | 0 | 1 | 0 | 1 | 0 | 0 | 0 | 0 | 0 | 1 | 0 | 1 | 0 | 0 | 0 | 0 | 0 | 0 | 1 | 0 | 0 | **5** |
| 35 | **ಬಾಗಲಕೋಟೆ** | **11** | ಉವಿಪ | ಬಾಗಲಕೋಟೆ | 0 | 0 | 0 | 0 | 1 | 0 | 2 | 0 | 0 | 0 | 0 | 0 | 1 | 0 | 1 | 0 | 0 | 0 | 0 | 0 | 0 | 1 | 0 | 0 | **6** |
| 36 | **ಕೊಪ್ಪಳ** | **12** | ಉವಿಪ | ಕೊಪ್ಪಳ | 0 | 0 | 0 | 0 | 1 | 0 | 1 | 0 | 0 | 0 | 0 | 0 | 1 | 0 | 1 | 0 | 0 | 0 | 0 | 0 | 0 | 1 | 0 | 0 | **5** |
| 37 | **ಬೀದರ್** | **13** | ಉವಿಪ | ಬೀದರ್ | 0 | 0 | 0 | 0 | 1 | 0 | 1 | 0 | 0 | 0 | 0 | 0 | 1 | 0 | 1 | 0 | 0 | 0 | 0 | 0 | 0 | 1 | 0 | 0 | **5** |
| 38 | **ಯಾದಗಿರಿ** | **14** | ಉವಿಪ | ಯಾದಗಿರಿ | 0 | 0 | 0 | 0 | 1 | 0 | 1 | 0 | 0 | 0 | 0 | 0 | 1 | 0 | 1 | 0 | 0 | 0 | 0 | 0 | 0 | 1 | 0 | 0 | **5** |
| | **ಉವಿಪ** | **14** | | | | | | | | | | | | | | | | | | | | | | | | | | | |
| | | **38** | ಒಟ್ಟು | | 1 | 7 | 15 | 25 | 41 | 32 | 74 | 1 | 3 | 1 | 8 | 21 | 51 | 8 | 61 | 3 | 14 | 2 | 9 | 2 | 25 | 42 | 1 | 1 | **448** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಮೀರ್ ಮಡಿಮನ್**

ಪೀಠಾಧಿಕಾರಿ, (ವಿದ್ಯುತ್ಚ್ಛಕ್ತಿ)

ಇಂಧನ ಇಲಾಖೆ.

**PR. 143**

**SC. 100**

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ವಿವಿಧ ವೃಂದಗಳ ಒಟ್ಟು 352 ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 01.04.2015 ರಿಂದ 31.03.2016ರವರೆಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಆನಾಸ 33 ಆಇಸೇ 2014, ದಿನಾಂಕ: 29.03.2014.
2. ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರ ಪತ್ರ ಸಂಖ್ಯೆ:ಸಿಎಫ್ಎಸ್/32/ಇಎಸ್‌ಟಿ(1)86–87, ದಿನಾಂಕ: 03.02.2015.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:29.03.2014ರ ಸರ್ಕಾರದ ಆದೇಶದಲ್ಲಿ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ 352 ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 01.04.2014 ರಿಂದ 31.03.2015ರವರೆಗೆ ಮುಂದುವರೆಸಿ ಆದೇಶಿಸಿದೆ.

ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ:03.02.2015ರ ಪತ್ರದಲ್ಲಿ ಮೇಲೆ (1)ರಲ್ಲಿ ಓದಲಾದ ದಿನಾಂಕ:29.03.2014ರ ಆದೇಶದಲ್ಲಿ ಮುಂದುವರೆಸಲಾದ 352 ತಾತ್ಕಾಲಿಕ ಹುದ್ದೆಗಳನ್ನು ಆಡಳಿತಾತ್ಮಕ ಹಿತದೃಷ್ಟಿಯಿಂದ ದಿನಾಂಕ:01.04.2015 ರಿಂದ 31.03.2016 ರವರೆಗೆ ಮುಂದುವರೆಸಬೇಕೆಂದು ಕೋರಿದ್ದಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿದ್ದು, ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 33 ಆಇಸೇ 2015, ಬೆಂಗಳೂರು, ದಿನಾಂಕ:03.03.2015**

ಸರ್ಕಾರದ ಆದೇಶ ಸಂಖ್ಯೆ: ಅನಾಸ 33 ಆಇಸೇ 2014, ದಿನಾಂಕ:29.03.2014ರಲ್ಲಿ ಮುಂದುವರೆಸಲಾಗಿದ್ದ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ವಿವಿಧ ವೃಂದಗಳ ಈ ಕೆಳಕಂಡ ಒಟ್ಟು 352 ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 01.04.2015 ರಿಂದ 31.03.2016 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಿ ಆದೇಶಿಸಿದೆ.

i) ದಿನಾಂಕ:1.11.85ರಿಂದ ಜಾರಿಗೊಳಿಸಲಾದ ಒಟ್ಟು 370 ತಾತ್ಕಾಲಿಕವಾಗಿ ಮಂಜೂರಾದ ಹುದ್ದೆಗಳಲ್ಲಿ ಕಡಿತಗೊಳಿಸಿದ ನಂತರ ತಾತ್ಕಾಲಿಕವಾಗಿ ಮುಂದುವರಿಸಬೇಕಾದ ಹುದ್ದೆಗಳು:

| ಕ್ರಮ ಸಂಖ್ಯೆ | ಹುದ್ದೆಗಳ ವಿವರ | ಮುಂದುವರಿಸಬೇಕಾದ ಹುದ್ದೆಗಳ ಸಂಖ್ಯೆ |
|---|---|---|
| 1 | ಶಿರಸ್ತೇದಾರರು | 107 |
| 2 | ಪ್ರಥಮ ದರ್ಜೆ ಸಹಾಯಕರು | 160 |
| 3 | ವಾಹನ ಚಾಲಕರು | 42 |
| | **ಒಟ್ಟು** | **309 ಹುದ್ದೆಗಳು** |

ii) ಸರ್ಕಾರದ ಆದೇಶ ಸಂಖ್ಯೆ: ಆನಾಸ 203 ಆಇಸೇ 98, ದಿನಾಂಕ: 2.4.98 ಹಾಗೂ 21.9.98ರ ಮತ್ತು ಸರ್ಕಾರದ ಆದೇಶ ಸಂಖ್ಯೆ:ಆನಾಸ 134 ಆಇಸೇ 97 ದಿನಾಂಕ:23.3.99ರ ಪ್ರಕಾರ ಹೊಸದಾಗಿ ಸೃಷ್ಠಿಸಲಾದ 7 ಜಿಲ್ಲೆಗಳಿಗೆ ಸೃಜಿಸಲಾದ ಹುದ್ದೆಗಳು:

| ಕ್ರಮ ಸಂಖ್ಯೆ | ಹುದ್ದೆಗಳ ವಿವರ | ಮುಂದುವರಿಸಬೇಕಾದ ಹುದ್ದೆಗಳ ಸಂಖ್ಯೆ |
|---|---|---|
| 1 | ಉಪ ನಿರ್ದೇಶಕರು | 07 |
| 2 | ಶಿರಸ್ತೇದಾರರು | 01 |
| 3 | ಬೆರಳಚ್ಚುಗಾರರು | 02 |
| 4 | ವಾಹನ ಚಾಲಕರು | 07 |
| 5 | ಲೆಕ್ಕಾಧೀಕ್ಷಕರು | 07 |
| | **ಒಟ್ಟು** | **24 ಹುದ್ದೆಗಳು** |

iii) ಸರ್ಕಾರದ ಆದೇಶ ಸಂಖ್ಯೆ:ಆನಾಸ 170 ಆಇಸೇ 07, ದಿನಾಂಕ:23.8.2007, ದಿನಾಂಕ: ಪ್ರಕಾರ ರಾಮನಗರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಿಗೆ ಸೃಜಿಸಲಾದ ಹುದ್ದೆಗಳು:

| ಕ್ರಮ ಸಂಖ್ಯೆ | ಹುದ್ದೆಗಳ ವಿವರ | ಮುಂದುವರಿಸಬೇಕಾದ ಹುದ್ದೆಗಳ ಸಂಖ್ಯೆ |
|---|---|---|
| 1 | ಉಪ ನಿರ್ದೇಶಕರು | 02 |
| 2 | ಲೆಕ್ಕಾಧೀಕ್ಷಕರು | 02 |
| 3 | ವ್ಯವಸ್ಥಾಪಕರು | 02 |
| 4 | ಪ್ರಥಮ ದರ್ಜೆ ಸಹಾಯಕರು (ಲೆಕ್ಕಪತ್ರ) | 02 |
| 5 | ದ್ವಿತೀಯ ದರ್ಜೆ ಸಹಾಯಕರು | 02 |
| 6 | ಬೆರಳಚ್ಚುಗಾರರು | 02 |
| 7 | ವಾಹನ ಚಾಲಕರು | 02 |
| | ಒಟ್ಟು | 14 ಹುದ್ದೆಗಳು |

iv) ಸರ್ಕಾರದ ಆದೇಶ ಸಂಖ್ಯೆ: ಆನಾಸ 177 ಆಇಸೇ 2009, ದಿನಾಂಕ: 30.3.2010ರ ಪ್ರಕಾರ ಯಾದಗಿರಿ ಜಿಲ್ಲೆಗೆ ಸೃಜಿಸಲಾದ ತಾತ್ಕಾಲಿಕ ಹುದ್ದೆಗಳು:

| ಕ್ರಮ ಸಂಖ್ಯೆ | ಹುದ್ದೆಗಳ ವಿವರ | ಮುಂದುವರಿಸಬೇಕಾದ ಹುದ್ದೆಗಳ ಸಂಖ್ಯೆ |
|---|---|---|
| 1 | ಉಪ ನಿರ್ದೇಶಕರು | 01 |
| 2 | ಲೆಕ್ಕಾಧೀಕ್ಷಕರು | 01 |
| 3 | ಶಿರಸ್ತೇದಾರರು/ವ್ಯವಸ್ಥಾಪಕರು | 01 |
| 4 | ಪ್ರಥಮ ದರ್ಜೆ ಸಹಾಯಕರು | 01 |
| 5 | ದ್ವಿತೀಯ ದರ್ಜೆ ಸಹಾಯಕರು | 01 |
| | **ಒಟ್ಟು** | **05 ಹುದ್ದೆಗಳು** |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996ರ ಐಟಂ 3 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಮಹಾದೇವ**

ಪೀಠಾಧಿಕಾರಿ, ಆಹಾರ-1 ಶಾಖೆ,

**PR. 229** ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:-** ಬೆಂಗಳೂರು ನಗರದಲ್ಲಿರುವ ಎಸ್.ಆರ್.ಎಸ್.ಜಿ ಸಂಪನ್ನಪ್ಪ ಧರ್ಮ ಸಂಸ್ಥೆಯನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸುವ ಕುರಿತು.

**ಓದಲಾಗಿದೆ:-** (1) ಸರ್ಕಾರದ ಆದೇಶ ಸಂಖ್ಯೆ:ಕಂಇ 118 ಮುಆಬಿ 2005 ದಿನಾಂಕ:27-02-2006

(2) ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆ:ಎಡಿಎಂ 5 ಸಿಆರ್ 08/2005-06 ದಿ:02-09-2014

**ಪ್ರಸ್ತಾವನೆ:-**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಬೆಂಗಳೂರು ನಗರದಲ್ಲಿರುವ ಎಸ್.ಆರ್.ಎನ್.ಜಿ ಸಂಪನ್ನಪ್ಪ ಧರ್ಮ ಸಂಸ್ಥೆಯನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯನ್ನು ಹೊರತುಪಡಿಸಬೇಕೆಂದು ಹಾಗೂ ಅದರ ಮೂಲ ಸ್ಥಾಪಕರ ಮರಣ ಶಾಸನದನ್ವಯ ಧಾರ್ಮಿಕ ದತ್ತಿ ಆಯುಕ್ತರು ಕಾರ್ಯನಿರ್ವಹಿಸಬೇಕೆಂದು ಆದೇಶಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರದಲ್ಲಿ ಪ್ರಸ್ತಾಪಿತ ಎಸ್.ಆರ್.ಎನ್.ಜಿ ಸಂಪನ್ನಪ್ಪ ಧರ್ಮ ಸಂಸ್ಥೆಯನ್ನು ಹೊರತುಪಡಿಸಿ, ಆದೇಶಿಸಿರುವ ಉಲ್ಲೇಖಿತ (1)ರ ಸರ್ಕಾರದ ಆದೇಶದಲ್ಲಿ ಸದರಿ ಸಂಸ್ಥೆಯ ಪುಟ ಸಂಖ್ಯೆ ಮತ್ತು ಕ್ರಮ ಸಂಖ್ಯೆಯನ್ನು ನಮೂದಿಸದೇ ಇರುವುದು, ಗೊಂದಲವಾಗಿರುತ್ತದೆ. ಆದುದರಿಂದ ಸಂಸ್ಥೆಯ ಆಡಳಿತವನ್ನು ದಾನಿಗಳ ಇಚ್ಛೆಯಂತೆ ಹಾಗೂ ಮೈಸೂರು ಕಂದಾಯ ಮೇಲ್ಮನವಿ ನ್ಯಾಯಾಧೀಕರಣದ ಆದೇಶದಂತೆ ಸರ್ಕಾರದ ಮಿತ ನಿಯಂತ್ರಣದಲ್ಲಿ ನಿರ್ವಹಿಸುವುದು ಸೂಕ್ತವಾಗಿರುತ್ತದೆ. ಈ ಬಗ್ಗೆ ಸರ್ಕಾರದ ಹಂತದಲ್ಲಿ ಪರಿಶೀಲಿಸಿ, ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 52 ಮುಆಬಿ 2014, ಬೆಂಗಳೂರು; ದಿನಾಂಕ: 26ನೇ ಡಿಸೆಂಬರ್, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದ ಧಾರ್ಮಿಕ ಸಂಸ್ಥೆಗಳನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಿ ಪ್ರಕಟಿಸಿರುವ ಬೆಂಗಳೂರು ನಗರ ಜಿಲ್ಲೆಯಲ್ಲಿನ ಪುಟ ಸಂಖ್ಯೆ (2)ರ ಕ್ರಮ ಸಂಖ್ಯೆ (57)ರಲ್ಲಿರುವ ಎಸ್.ಆರ್.ಎನ್.ಜಿ ಸಂಪನ್ನಪ್ಪ ಧರ್ಮ ಸಂಸ್ಥೆಯನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿದೆ. ಸದರಿ ಸಂಸ್ಥೆಯ ಸ್ಥಾಪಕರಾದ ಶ್ರೀ ಸಂಪನ್ನಪ್ಪರವರ ಮರಣ ಶಾಸನದನ್ವಯ ಹಾಗೂ ಮೈಸೂರು ಕಂದಾಯ ಮೇಲ್ಮನವಿ ನ್ಯಾಯಾಧೀಕರಣದ ಆದೇಶದಂತೆ ಧಾರ್ಮಿಕ ದತ್ತಿ ಆಯುಕ್ತರ ಮಿತ ನಿಯಂತ್ರಣದಲ್ಲಿ ಕಾರ್ಯನಿರ್ವಹಿಸಬೇಕೆಂದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೃಷ್ಣಾಜಿ ಡಿ. ಕೆರೂರ್**

**PR. 182** ಪೀಠಾಧಿಕಾರಿ

**SC. 25** ಕಂದಾಯ ಇಲಾಖೆ (ಮುಜರಾಯಿ)

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಹೈದ್ರಾಬಾದ್-ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಲಿಗೆ ಹುದ್ದೆಗಳ ಸೃಜನೆ ಕುರಿತು.

**ಓದಲಾಗಿದೆ:** 1) ಹೈದ್ರಾಬಾದ್-ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಲಿಯ ಪತ್ರ ಸಂ ಹೈಕಪ್ರಅಮಂ-ಗು/ಮಂ.ಸಭೆ-2/02/2014-15 ದಿನಾಂಕ 5/7/2014

2) ಸರ್ಕಾರದ ಅಧಿಸೂಚನೆ ಸಂಖ್ಯೆ ಸಂವ್ಯಶಾಇ 59 ಶಾಸನ 2013 ದಿನಾಂಕ 22/02/2014

**ಪ್ರಸ್ತಾವನೆ**

ರಾಜ್ಯದ ಹೈದ್ರಾಬಾದ್–ಕರ್ನಾಟಕ ಪ್ರದೇಶದ ಅಸಮತೋಲನೆಯ ನಿವಾರಣೆಗೆ ಸಂವಿಧಾನದ ಅನುಚ್ಛೇದ 371(ಜೆ) ಹೈದ್ರಾಬಾದ್–ಕರ್ನಾಟಕ ಪ್ರದೇಶದ ಹಿಂದುಳಿದ ಆರು ಜಿಲ್ಲೆಗಳಿಗೆ ಈ ಕೆಳಕಂಡ ಅಂಶಗಳನ್ನೊಳಗೊಂಡ ಒಂದು ವಿಶೇಷ ಸ್ಥಾನಮಾನವನ್ನು ಕಲ್ಪಿಸಿದೆ:

1. ಒಂದು ಪ್ರತ್ಯೇಕ ಅಭಿವೃದ್ಧಿ ಮಂಡಳಿಯನ್ನು ಸ್ಥಾಪಿಸಲು
2. ಪ್ರದೇಶದ ಅಭಿವೃದ್ಧಿಗೆ ಸಾಕಷ್ಟು ಅನುದಾನದ ಹಂಚಿಕೆಯನ್ನು ಮಂಡಳಿಯು ಖಚಿತಪಡಿಸಿಕೊಳ್ಳುವುದು
3. ಶಿಕ್ಷಣ ಹಾಗೂ ಸರ್ಕಾರಿ ನೌಕರಿಯಲ್ಲಿ ಸ್ಥಳೀಯ ಮೀಸಲಾತಿ

2 ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 06 ಪಿಎಲ್ಎಕ್ಸ್ 2012 ದಿನಾಂಕ 6/11/2013ರನ್ವಯ ಹೈದ್ರಾಬಾದ್–ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಲಿಯನ್ನು ಸೃಜಿಸಿದೆ. ಹೈದ್ರಾಬಾದ್–ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಲಿಯನ್ನು ಸೃಜಿಸಿದ ಪೂರ್ವದಲ್ಲಿ ಹೈದ್ರಾಬಾದ್–ಕರ್ನಾಟಕ ಪ್ರದೇಶಾಭಿವೃದ್ಧಿ ಯೋಜನೆಗಳನ್ನು ಅನುಷ್ಠಾನಿಸುತ್ತಿದ್ದ ಆಗಿನ ಹೈದರಾಬಾದ್–ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಲಿ ಅಧಿನಿಯಮವನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯನ್ವಯ ನಿರಸನಗೊಳಿಸಿ ಮಂಡಲಿಯ ಎಲ್ಲಾ ಸ್ವತ್ತುಗಳು, ಹೊಣೆಗಾರಿಕೆಗಳು ಹಾಗೂ ಮಂಜೂರಾದ ಹುದ್ದೆಗಳನ್ನು ಹೈದ್ರಾಬಾದ್–ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಲಿಗೆ ವರ್ಗಾಯಿಸಿದೆ.

3 ಹೈದ್ರಾಬಾದ್–ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಲಿಯ ಜವಾಬ್ದಾರಿ ಹಾಗೂ ವ್ಯಾಪ್ತಿಯ ಪ್ರಮಾಣವು ಹಿಂದಿನ ಹೈದ್ರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿಗಿಂತ ಅಧಿಕವಾಗಿರುವುದಾಗಿ ತಿಳಿಸಿ ಮಂಡಲಿಯ ಸಮರ್ಪಕ ಕಾರ್ಯನಿರ್ವಹಣೆಗೆ 38 ಹುದ್ದೆಗಳನ್ನು ಹೊಸದಾಗಿ ಸೃಜಿಸಲು ಹೈದ್ರಾಬಾದ್–ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಲಿಯು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿದೆ.

4 ಸದರಿ ಹುದ್ದೆಗಳಿಗೆ ಪ್ರತಿ ವರ್ಷ ರೂ 1.55 ಕೋಟಿಗಳ ಅವಶ್ಯಕತೆ ಇರುತ್ತದೆ. ಪ್ರಸಕ್ತ ಸಾಲಿಗೆ ಹೈದ್ರಾಬಾದ್–ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಲಿಗೆ ಆಯವ್ಯಯದಲ್ಲಿ ಒದಗಿಸಿದ ರೂ. 600 ಕೋಟಿಗಳ ಪೈಕಿ ಪ್ರತಿಶತ 30 ರಷ್ಟು ಸಾಂಸ್ಥಿಕ ಸೌಕರ್ಯಗಳಿಗೆ ಒದಗಿಸುವ ಅನುದಾನದ ಪ್ರತಿಶತ 4 ರಷ್ಟು, ಅಂದರೆ, ರೂ 7.20 ಕೋಟಿಗಳು ಆಡಳಿತ ವೆಚ್ಚಕ್ಕಾಗಿ ಭರಿಸುವ ಕ್ರಿಯಾ ಯೋಜನೆಯನ್ನು ಮಾನ್ಯ ರಾಜ್ಯಪಾಲರು ಅನುಮೋದಿಸಿರುತ್ತಾರೆ. ಹೈದ್ರಾಬಾದ್–ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಲಿಯು ಪ್ರಸ್ತಾಪಿಸಿರುವ ಹುದ್ದೆಗಳನ್ನು ಹೊಸದಾಗಿ ಸೃಜಿಸಿ ನಂತರ ಸದರಿ ಹುದ್ದೆಗಳನ್ನು ಸಂಬಂಧಪಟ್ಟ ಆಡಳಿತ ಇಲಾಖೆಗಳಾದ ಕಂದಾಯ, ಲೋಕೋಪಯೋಗಿ, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ಮತ್ತು ರಾಜ್ಯ ಲೆಕ್ಕ ಪತ್ರ ಇಲಾಖೆಗಳಿಂದ ನಿಯೋಜನೆ ಮೇರೆಗೆ ಭರ್ತಿ ಮಾಡಬೇಕಾಗುತ್ತದೆ. ಹೈದ್ರಾಬಾದ್– ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಲಿಯ ಹೊಸದಾಗಿ ಸೃಜಿಸಲುದ್ದೇಶಿಸಿರುವ ಹುದ್ದೆಗಳ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ ಮತ್ತು ಸಮರ್ಪಕವಾಗಿ ಕಾಮಗಾರಿಗಳು ನಡೆಯಬೇಕಾಗಿದ್ದಲ್ಲಿ ಹೆಚ್ಚುವರಿ ಹುದ್ದೆಗಳನ್ನು ಸೃಷ್ಟಿಸುವುದು ಸಮಜಂಸವಾಗಿದೆ ಎಂದು ಮನಗೊಂಡಿದೆ.

**ಸರ್ಕಾರದ ಆದೇಶ ಸಂಖ್ಯೆ ಯೋಇ 02 ಹೈಕವಿ 2014, ಬೆಂಗಳೂರು, ದಿನಾಂಕ 03.03.2015**

1 ಹೈದ್ರಾಬಾದ್–ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಲಿಯ ಜವಾಬ್ದಾರಿ ಹಾಗೂ ಕಾರ್ಯವ್ಯಾಪ್ತಿಯ ಪ್ರಮಾಣವು ಹಿಂದಿನ ಹೈದ್ರಾಬಾದ್–ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗಿಂತ ಅಧಿಕವಾಗಿರುವುದರಿಂದ ಈ ಕೆಳಕಂಡ ಹುದ್ದೆಗಳನ್ನು ಅನುಚ್ಛೇದ 371(ಜೆ) ರನ್ವಯ ಸ್ಥಾಪಿಸಲಾದ ಹೈದ್ರಾಬಾದ್–ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಲಿಗೆ ಹೊಸದಾಗಿ ಸೃಜಿಸಲು ಆದೇಶಿಸಿದೆ.

| ಕ್ರ. ಸಂ. | ಹುದ್ದೆಗಳ ಹೆಸರು | ಹುದ್ದೆಗಳ ಸಂಖ್ಯೆ | ಭರ್ತಿ ಮಾಡುವ ವಿಧಾನ |
|---|---|---|---|
| 1. | ಅಧೀಕ್ಷಕ ಅಭಿಯಂತರರು | 01 | ಲೋಕೋಪಯೋಗಿ ಇಲಾಖೆಯಿಂದ ನಿಯೋಜನೆ |
| 2. | ಕಾರ್ಯಪಾಲಕ ಅಭಿಯಂತರರು | 01 | ಲೋಕೋಪಯೋಗಿ ಇಲಾಖೆಯಿಂದ ನಿಯೋಜನೆ |
| 3. | ಸಹಾಯಕ ಕಾರ್ಯಪಾಲಕ ಅಭಿಯಂತರರು | 02 | ಲೋಕೋಪಯೋಗಿ ಇಲಾಖೆಯಿಂದ ನಿಯೋಜನೆ |
| 4. | ಸಹಾಯಕ ಅಭಿಯಂತರರು | 03 | ಲೋಕೋಪಯೋಗಿ ಇಲಾಖೆಯಿಂದ ನಿಯೋಜನೆ |
| 5. | ಉಪ ನಿರ್ದೇಶಕರು | 01 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದಿಂದ ನಿಯೋಜನೆ |
| 6. | ಸಹಾಯಕ ನಿರ್ದೇಶಕರು | 02 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದಿಂದ ನಿಯೋಜನೆ |
| 7. | ಸಹಾಯಕ ಸಾಂಖ್ಯಿಕ ಅಧಿಕಾರಿ | 02 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದಿಂದ ನಿಯೋಜನೆ |
| 8. | ಸಾಂಖ್ಯಿಕ ನಿರೀಕ್ಷಕರು | 03 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದಿಂದ ನಿಯೋಜನೆ |
| 9. | ಸಹಾಯಕ ಹಣಕಾಸು ನಿಯಂತ್ರಕರು | 01 | ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ನಿಯೋಜನೆ |
| 10. | ಲೆಕ್ಕ ಅಧೀಕ್ಷಕರು | 01 | ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ನಿಯೋಜನೆ |
| 11. | ಪ್ರಥಮ ದರ್ಜೆ ಲೆಕ್ಕ ಸಹಾಯಕರು | 03 | ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ನಿಯೋಜನೆ |
| 12 | ಅಧ್ಯಕ್ಷರ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿ | 01 | ನಿಯೋಜನೆ/ಹೊರಗುತ್ತಿಗೆ |
| 13 | ಪ್ರಥಮ ದರ್ಜೆ ಸಹಾಯಕರು | 03 | ಕಂದಾಯ ಇಲಾಖೆಯಿಂದ ನಿಯೋಜನೆ |
| 14 | ವಾಹನ ಚಾಲಕರು | 09 | ನಿಯೋಜನೆ/ಹೊರಗುತ್ತಿಗೆ |
| 15 | ಸೀನಿಯರ್ ಪ್ರೋಗ್ರಾಮರ್ | 01 | ಹೊರಗುತ್ತಿಗೆ |
| 16 | ಕಂಪ್ಯೂಟರ್ ಆಪರೇಟರ್ | 02 | ಹೊರಗುತ್ತಿಗೆ |
| 17 | ಸಮೂಹ ಡಿ ದರ್ಜೆ ನೌಕರರು | 02 | ಹೊರಗುತ್ತಿಗೆ |
| | **ಒಟ್ಟು** | **38** | |

2 ಹೊರಗುತ್ತಿಗೆ ಆಧಾರದ ಮೇಲೆ ಹುದ್ದೆಗಳನ್ನು ಭರ್ತಿ ಮಾಡುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999 ಮತ್ತು ನಿಯಮಗಳು 2000 ಗಳನ್ನು ಅನುಸರಿಸುವುದು.

3 ಮೇಲ್ಕಂಡ ಹುದ್ದೆಗಳಿಗೆ ತಗಲುವ ವೆಚ್ಚವನ್ನು ಅನುಚ್ಛೇದ 371(ಜೆ) ಹೈದ್ರಾಬಾದ್–ಕರ್ನಾಟಕ ಪ್ರದೇಶಾಭಿವೃದ್ಧಿ ಯೋಜನೆಯಡಿ ಲೆಕ್ಕ ಶೀರ್ಷಿಕೆ 2575–60–265–0–03 ರಡಿ ಭರಿಸತಕ್ಕದ್ದು.

4 ಈ ಆದೇಶವನ್ನು ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂಖ್ಯೆ ಆಇ 316 ವೆಚ್ಚ 6 2014, ದಿನಾಂಕ 16.02.2015ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಫೀ ಅಹಮದ್ ಎಂ ಎಸ್**

ಸರ್ಕಾರದ ಅಧೀನ ಕಾರ್ಯದರ್ಶಿ, 1 ಮತ್ತು 2

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

**PR. 203**

## ಕಾರ್ಮಿಕ ಸಚಿವಾಲಯ

**ವಿಷಯ :** ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ಗ್ರೂಪ್–ಎ ದರ್ಜೆಯ ಅಧಿಕಾರಿಗಳಿಗೆ ವಾಹನ ಭತ್ಯೆ ಅನುದಾನವನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಪತ್ರದ ಸಂಖ್ಯೆ: ಕಾಇ 16 ಕಾಬಾಸೇ 2013, ದಿನಾಂಕ: 30–03–2013(ಭಾಗ–1).
2) ನಿರ್ದೇಶಕರು, ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ ರವರ ಪ್ರಸ್ತಾವನೆ ಸಂ. ಇಎಸ್‌ಟಿ–01/ಇತರೆ ಸಿಆರ್–128/2012–13/667, ದಿನಾಂಕ: 12–09–2014.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಕಾರ್ಖಾನೆಗಳು, ಬಾಯ್ಲರುಗಳು ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯಲ್ಲಿ ವಿಭಾಗೀಯ ಕಛೇರಿಗಳಲ್ಲಿ ಸರ್ಕಾರಿ ಕೆಲಸಗಳನ್ನು ಸಕಾಲದಲ್ಲಿ ನಿರ್ವಹಿಸಲು ಇಲಾಖೆಯ ಕಾಯ್ದೆಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಿ ಕಾರ್ಮಿಕರಿಗೆ/ ಸಾರ್ವಜನಿಕರಿಗೆ ಸೌಲಭ್ಯ/ಸೇವೆಗಳನ್ನು ಪರಿಣಾಮಕಾರಿಯಾಗಿ ಒದಗಿಸುವ ನಿಟ್ಟಿನಲ್ಲಿ ಇಲಾಖೆಯ ಗ್ರೂಪ್–"ಎ" ದರ್ಜೆಯ ಹಿರಿಯ ಹಾಗೂ ಕಿರಿಯ ಒಟ್ಟು 23 ಹುದ್ದೆಗಳ ಕ್ಷೇತ್ರಾಧಿಕಾರಿಗಳಿಗೆ ದಿನಾಂಕ:01–04–2013 ರಿಂದ ಜಾರಿಗೆ ಬರುವಂತೆ ವಾಹನ ಭತ್ಯೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ನಿಗಧಿಪಡಿಸಿರುವ ಮಾರ್ಗಸೂಚಿಗಳನ್ವಯ ಬಾಡಿಗೆ ಆಧಾರದ ಮೇಲೆ ವಾಹನಗಳನ್ನು ಪಡೆಯಲು ಸರ್ಕಾರದ ಮಂಜೂರಾತಿ ನೀಡಲಾಗಿದೆ. ನಿರ್ದೇಶಕರು, ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ಗ್ರೂಪ್–ಎ ಮತ್ತು ಗ್ರೂಪ್–ಬಿ ವೃಂದದ ಅಧಿಕಾರಿಗಳಿಗೆ ಲೆಕ್ಕ ಶೀರ್ಷಿಕೆ 2230–01–102–0–01–195 ಸಾರಿಗೆ ವೆಚ್ಚದ ಅಡಿ ಖಾಯಂ ಮುಂಗಡವನ್ನು ಮಂಜೂರು ಮಾಡಲು ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಿರುತ್ತಾರೆ.

ಮುಂದುವರೆದು ವರದಿಮಾಡಿ 2014–15ನೇ ಸಾಲಿನ ಉಳಿದ ಅವಧಿಗೆ ಲೆಕ್ಕ ಶೀರ್ಷಿಕೆ 2230–01–102–0–01–195 ಸಾರಿಗೆ ವೆಚ್ಚದಡಿ ಗ್ರೂಪ್–ಎ ಅಧಿಕಾರಿಗಳಿಗೆ ಕ್ರಮವಾಗಿ ಯೋಜನೆ ಅಡಿಯಲ್ಲಿ ರೂ.9.00ಲಕ್ಷಗಳು ಮತ್ತು ಯೋಜನೇತರ ಅಡಿಯಲ್ಲಿ ರೂ.38.00ಲಕ್ಷಗಳ ಹೆಚ್ಚುವರಿ ಅನುದಾನಕ್ಕಾಗಿ ಬೇಡಿಕೆ ಸಲ್ಲಿಸಲಾಗಿದೆಯೆಂದು ತಿಳಿಸಿರುತ್ತಾರೆ ಮತ್ತು ಕ್ಷೇತ್ರಾಧಿಕಾರಿಗಳ ಕಾರ್ಯ ಚಟುವಟಿಕೆಗಳು ನಿರಂತರ ಚಲನವಲನ ಪ್ರಕ್ರಿಯೆಯಿಂದ ಕೂಡಿರುವುದರಿಂದ ಇಲಾಖೆಯ ಗ್ರೂಪ್–'ಎ' ಮತ್ತು 'ಬಿ' ದರ್ಜೆಯ ಅಧಿಕಾರಿಗಳಿಗೆ "195–ಸಾರಿಗೆ ವೆಚ್ಚ" ದಡಿ ಖಾಯಂ ಮುಂಗಡವನ್ನು ಮಂಜೂರು ಮಾಡುವಂತೆ ಕೋರಿ ಸರ್ಕಾರಕ್ಕೆ ಮನವಿ ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂ : ಕಾಇ 16 ಕಾಬಾಸೇ 2013 ಬೆಂಗಳೂರು ದಿನಾಂಕ : 07–02–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕಾರ್ಖಾನೆಗಳು, ಬಾಯ್ಲರುಗಳು ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ಗ್ರೂಪ್–'ಎ' ವೃಂದದ ಅಧಿಕಾರಿಗಳಿಗೆ ಅವರು ತಮ್ಮ ದೈನಂದಿನ ಸರ್ಕಾರಿ ಕೆಲಸಗಳಿಗೆ ನಿಗಧಿತ ಕ್ಷೇತ್ರ ವ್ಯಾಪ್ತಿಗೆ, ನ್ಯಾಯಾಲಯದ ಕೆಲಸಗಳಿಗೆ ಸರ್ಕಾರದ ವಿವಿಧ ಇಲಾಖೆಯ ಸಭೆಗಳಿಗೆ ಅಪಘಾತ/ದೂರು ತನಿಖೆ ಇತ್ಯಾಧಿ ಕೆಲಸಗಳಿಗೆ ಅನುವಾಗುವ ಸಲುವಾಗಿ ವಾಹನ ಭತ್ಯೆಯ ಸಂಬಂದ ಅಗತ್ಯವಿರುವ ಅನುದಾನವನ್ನು ಯೋಜನೆಯಡಿ ರೂ.9.00ಲಕ್ಷಗಳನ್ನು (ಒಂಬತ್ತು ಲಕ್ಷಗಳು ಮಾತ್ರ) ಹಾಗೂ ಯೋಜನೇತರ ಅಡಿಯಲ್ಲಿ ರೂ.38.00ಲಕ್ಷಗಳನ್ನು (ಮೂವತ್ತೆಂಟು ಲಕ್ಷಗಳು ಮಾತ್ರ) ಲೆಕ್ಕ ಶೀರ್ಷಿಕೆ 2230–01–102–0–01–195 ಸಾರಿಗೆ ವೆಚ್ಚಗಳಡಿ 2014–15ರ ಪೂರಕ ಅಂದಾಜು II ರಡಿ ಭರಿಸಲು ಮಂಜೂರಾತಿ ನೀಡಿ ಮಾಡಿ ಆದೇಶಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿ ಟಿಪ್ಪಣಿ ಸಂಖ್ಯೆ:ಆಇ 613 ವೆ–9/2014, ದಿನಾಂಕ:10–11–2014ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬೋರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ, (ಕಾರ್ಖಾನೆಗಳು ಮತ್ತು ಬಾಯ್ಲರುಗಳು)

**PR. 200**

**SC. 50**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

ವಿಷಯ: ಶ್ರೀ ಅರುಣ್ ಪಂಪೂಸಾ ಕಠಾರಿ, ಔಷಧ ಪರಿವೀಕ್ಷಕರು, ಮೈಸೂರು ಗುಪ್ತವಾರ್ತೆ ಉಪ ಔಷಧ ನಿಯಂತ್ರಕರ ಪ್ರಾದೇಶಿಕ ಕಛೇರಿ, ಮೈಸೂರು, ಇವರ ಅನಧಿಕೃತ ಗೈರು ಹಾಜರಿ ಸಂಬಂಧ, ಇಲಾಖಾ ವಿಚಾರಣೆ ಕುರಿತು ಸರ್ಕಾರಿ ದಂಡನೆ ಆದೇಶ ಹೊರಡಿಸುವ ಬಗ್ಗೆ.

ಓದಲಾಗಿದೆ:
1. ಔಷಧ ನಿಯಂತ್ರಕರ ಪತ್ರ ಸಂ:ಔನಿಇ/596/ಸಿಬ್ಬಂದಿ/2012–13 ದಿನಾಂಕ:19.10.2012.
2. ಕೆ.ಸಿ.ಎಸ್(ಸಿ.ಸಿ.ಎ.) ನಿಯಮಾವಳಿ ನಿಯಮ 1957ರ ನಿಯಮ 11 ರ ಮೇರೆಗೆ ಸರ್ಕಾರದ ತಿಳುವಳಿಕೆ ಪತ್ರ ಸಂಖ್ಯೆ: ಆಕುಕ 260 ಐಎಂಎಂ 2013 ದಿ:31.05.2013.
3. ಶ್ರೀ ಅರುಣ್ ಪಂಪುಸಾ ಕಠಾರಿ, ಔಷಧ ಪರಿವೀಕ್ಷಕರು, (ಗುಪ್ತವಾರ್ತೆ) ಇವರ ಲಿಖಿತ ಸಮಜಾಯಿಷಿ ಪತ್ರ ದಿನಾಂಕ: 17.06.2013.
4. ಸರ್ಕಾರಿ ಆದೇಶ ಸಂಖ್ಯೆ:ಆಕುಕ 260 ಐಎಂಎಂ 2012, ದಿನಾಂಕ:30.09.2013.
5. ವಿಚಾರಣಾಧಿಕಾರಿಯವರ ವಿಚಾರಣಾ ವರದಿ ದಿನಾಂಕ: 07.07.2014.
6. ಸರ್ಕಾರದ ಎರಡನೇ ಕಾರಣ ಕೇಳುವ ನೋಟೀಸ್ ಸಂಖ್ಯೆ:ಆಕುಕ 260 ಐಎಂಎಂ 2012, ದಿನಾಂಕ:22.07.2014.
7. ಪತ್ರ ಸಂ:ಔನಿಇ 730 ಸಿಬ್ಬಂದಿ/2012–13 ದಿನಾಂಕ:02.02.2015.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (1) ರ ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ ಇವರು ತಮ್ಮ ಪ್ರಸ್ತಾವನೆಯಲ್ಲಿ ಶ್ರೀ ಅರುಣ್ ಪಂಪುಸಾ ಕಠಾರಿ, ಔಷಧ ಪರಿವೀಕ್ಷಕರು (ಗುಪ್ತವಾರ್ತೆ) ಉಪ ಔಷಧ ನಿಯಂತ್ರಕರ ಪ್ರಾದೇಶಿಕ ಕಛೇರಿ, ಮೈಸೂರು, ಇಲ್ಲಿ ಕರ್ತವ್ಯ ನಿರ್ವಹಿಸುತಿದ್ದ ಅವಧಿಯಲ್ಲಿ ದಿನಾಂಕ:12.06.2012ರಿಂದ 11.07.2012ರವರೆಗೆ 30 ದಿನಗಳ ಗಳಿಕೆ ರಜೆಯನ್ನು ಮಂಜೂರಾತಿ ಪಡೆದು ರಜೆಯಲ್ಲಿ ತೆರಳಿದ್ದು, ತದನಂತರ ದಿನಾಂಕ:12.07.2012 ರಿಂದ ಅನಧಿಕೃತವಾಗಿ ಗೈರು ಹಾಜರಾಗಿರುತ್ತಾರೆ. ಸದರಿ ಅಧಿಕಾರಿಯವರನ್ನು ಕರ್ತವ್ಯಕ್ಕೆ ಹಾಜರಾಗುವಂತೆ ದಿನಾಂಕ: 12.07.2012 18.07.2012, 14.09.2012 ಹಾಗೂ 27.11.2012 ರ ಪತ್ರಗಳಲ್ಲಿ ಕರೆ ನೀಡಲಾಗಿತ್ತು. ಅದರೆ ಅಧಿಕಾರಿಯವರು ದಿನಾಂಕ:16.07.2012, 07.08.2012, 25.09.2012, 12.10.2012, 13.11.2012, 18.12.2012, 17.01.2013, ಮತ್ತು 17.06.2013ರ ಪತ್ರಗಳಲ್ಲಿ ರಜೆಯನ್ನು ಮುಂದುವರೆಸುವಂತೆ ಕೋರಿರುತ್ತಾರೆ. ಅಧಿಕಾರಿಯವರು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಿಯಾಗಿ ಕಛೇರಿ ಕಾರ್ಯಗಳಿಗೆ ಧಕ್ಕೆಯನ್ನುಂಟು ಮಾಡಿರುವುದರಿಂದ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಕುರಿತು ಕರಡು ಆರೋಪ ಪಟ್ಟಿಗಳನ್ನು ರಚಿಸಿ ಸರ್ಕಾರಕ್ಕೆ ಸಲ್ಲಿಸಿದ್ದಾರೆ. ಅದರಂತೆ ಉಲ್ಲೇಖ (2)ರಲ್ಲಿ ಕಾರಣ ಕೇಳುವ ನೋಟೀಸು ಮತ್ತು ದೋಷಾರೋಪಣಾ ಪಟ್ಟಿ ಜಾರಿಗೊಳಿಸಿ, ವಿವರಣೆ ಕೋರಲಾಗಿದೆ.

ಶ್ರೀ ಅರುಣ್ ಪಂಪುಸಾ ಕಠಾರಿ, ಔಷಧ ಪರಿವೀಕ್ಷಕರು (ಗುಪ್ತವಾರ್ತೆ) ಇವರು ಉಲ್ಲೇಖ (3)ರ ತಮ್ಮ ಲಿಖಿತ ಹೇಳಿಕೆಯಲ್ಲಿ ಆರೋಪಗಳನ್ನು ನಿರಾಕರಿಸಿದ್ದು, ಆರೋಪಗಳಿಂದ ಮುಕ್ತಗೊಳಿಸುವಂತೆ ಕೋರಿದ್ದಾರೆ. ಈ ಕುರಿತು ಇಲಾಖಾ ಮುಖ್ಯಸ್ಥರನ್ನು ದಿನಾಂಕ:24.07.2013ರ ಪತ್ರದಲ್ಲಿ ಕೋರಲಾಗಿ, ಸದರಿ ಅಧಿಕಾರಿಯವರು ನೀಡಿರುವ ರಕ್ಷಣಾತ್ಮಕ ಹೇಳಿಕೆಯಲ್ಲಿನ ಅಂಶಗಳು ಸಮಂಜಸವಲ್ಲವೆಂದು ದಿನಾಂಕ:07.09.2013ರ ಪತ್ರದಲ್ಲಿ ತಮ್ಮ ಅಭಿಪ್ರಾಯ ನೀಡಿರುವ ಮೇರೆಗೆ ಈ ಬಗ್ಗೆ ಸತ್ಯಾಸತ್ಯತೆಯನ್ನು ಅರಿಯಲು ಸದರಿ ಅಧಿಕಾರಿಯವರ ವಿರುದ್ಧ ಇಲಾಖಾ ವಿಚಾರಣೆಯನ್ನು ಮುಂದುವರೆಸುವುದನ್ನು ಸೂಕ್ತವೆಂದು ನಿರ್ಧರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ–11(2) ರನ್ವಯ ವಿಚಾರಣಾಧಿಕಾರಿಯನ್ನು ಹಾಗೂ ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಸದರಿ ಪ್ರಕರಣದ ಬಗ್ಗೆ ವಿಚಾರಣೆಯನ್ನು ನಡೆಸಿದ ವಿಚಾರಣಾಧಿಕಾರಿಗಳು ಮೇಲೆ ಓದಲಾದ ಕ್ರ.ಸಂ.(5) ರಲ್ಲಿ ಸರ್ಕಾರಕ್ಕೆ ಸಲ್ಲಿಸಿದ ವಿಚಾರಣಾ ವರದಿಯಲ್ಲಿ ಶ್ರೀ ಅರುಣ್ ಪಂಪುಸ ಕಠಾರಿ, ಔಷಧ ಪರಿವೀಕ್ಷಕರು (ಗುಪ್ತವಾರ್ತೆ) ಇವರ ವಿರುದ್ಧ ಮಾಡಲಾದ ಆರೋಪಗಳು ರುಜುವಾತಾಗಿರುವುದಾಗಿ ದೃಢಪಡಿಸಿದ್ದಾರೆ. ಮುಂದುವರೆದು ಮೇಲೆ ಓದಲಾದ ಕ್ರ.ಸಂ.(6)ರಲ್ಲಿ ಎರಡನೇ ಕಾರಣ ಕೇಳುವ ನೋಟೀಸನ್ನು ವಿಚಾರಣಾ ವರದಿಯೊಂದಿಗೆ ಆಪಾದಿತ ಅಧಿಕಾರಿಯವರಿಗೆ ಔಷಧ ನಿಯಂತ್ರಣ ಇಲಾಖೆಯ ಮುಖಾಂತರ ಜಾರಿಗೊಳಿಸಿ, ಸದರಿ ವಿಚಾರಣಾ ವರದಿಯನ್ನು ಸರ್ಕಾರವು ಏಕೆ ಅಂಗೀಕರಿಸಬಾರದೆಂಬ ಬಗ್ಗೆ ಅವರ ಲಿಖಿತ ಸಮಜಾಯಿಷಿಯನ್ನು 30 ದಿನಗಳೊಳಗೆ ನೀಡುವಂತೆ ತಿಳಿಸಲಾಗಿತ್ತು. ಸದರಿ ನೋಟೀಸನ್ನು ಅಧಿಕಾರಿಯವರು ದಿನಾಂಕ:15.08.2014ರಂದು ಸ್ವೀಕರಿಸಿದ್ದರೂ, ಯಾವುದೇ ಲಿಖಿತ ಹೇಳಿಕೆ/ಸಮಜಾಯಿಷಿಯನ್ನು ನೀಡಿರುವುದಿಲ್ಲ. ಶ್ರೀ ಅರುಣ್ ಪಂಪೂಸಾ ಕಠಾರಿ, ಔಷಧ ಪರಿವೀಕ್ಷಕರು, ಮೈಸೂರು ಗುಪ್ತವಾರ್ತೆ ಉಪ ಔಷಧ ನಿಯಂತ್ರಕರ ಪ್ರಾದೇಶಿಕ ಕಛೇರಿ, ಮೈಸೂರು, (ಪ್ರಸ್ತುತ ಅನಧಿಕೃತ ಗೈರು ಹಾಜರಿ) ಇವರು ದಿನಾಂಕ: 12.7.2012 ರಿಂದ ದಿನಾಂಕ:31.10.2013ರ ವರೆಗೆ ರಜೆ ಮಂಜೂರು ಮಾಡುವ ಪೂರ್ವದಲ್ಲಿಯೇ ಇವರ ವಿರುದ್ಧ ಅನಧಿಕೃತ ಗೈರು ಹಾಜರಿ ಸಂಬಂಧ ಇಲಾಖಾ ವಿಚಾರಣೆ ಪ್ರಾರಂಭವಾದ್ದರಿಂದ ಈ ಮಧ್ಯೆ ರಜಾ ಅರ್ಜಿಯನ್ನು ಪರಿಗಣಿಸಲು ಸಾಧ್ಯವಿಲ್ಲವೆಂದು ಅನೇಕ ಬಾರಿ ಸಕ್ಷಮ ಪ್ರಾಧಿಕಾರವು ಪತ್ರ ಕಳುಹಿಸಿದ್ದರೂ ಇಲ್ಲಿಯವರೆಗೆ ಕರ್ತವ್ಯಕ್ಕೆ ವರದಿ ಮಾಡಿಕೊಂಡಿಲ್ಲದೆ ಅನಧಿಕೃತ ಗೈರು ಹಾಜರಿಯಲ್ಲೇ ಮುಂದುವರಿದಿರುವುದಾಗಿ ಮೇಲಿನ ಉಲ್ಲೇಖ(7)ರ ಔಷಧ ನಿಯಂತ್ರಕರ ವರದಿಯಿಂದ ದೃಢಪಟ್ಟಿರುತ್ತದೆ.

ಶ್ರೀ ಅರುಣ್ ಪಂಪೂಸಾ ಕಠಾರಿ, ಔಷಧ ಪರಿವೀಕ್ಷಕರು, ಮೈಸೂರು ಗುಪ್ತವಾರ್ತೆ ಉಪ ಔಷಧ ನಿಯಂತ್ರಕರ ಪ್ರಾದೇಶಿಕ ಕಛೇರಿ ಮೈಸೂರು, ಇವರ ರಜಾ ಅರ್ಜಿಗಳನ್ನು ಈ ಕೆಳಗಿನಂತೆ ಪರಿಶೀಲಿಸಲಾಗಿದೆ:–

| Sl. No. | Date of Representations to sanctions of leaves by Sri Arun Pampusa Katari, Drug Inspector, Mysore | Details for sanctions of leaves. | Remarks |
|---|---|---|---|
| 1. | Dated:20.06.2012 - 30 days. | 12.06.2012 to 11.07.2012 | Leave sanctioned by DDC, Mysore, vide his letter dated 24.7.2013 |
| 2. | Dated:16.07.2012 - 31 days. | 12.07.2012 to 11.08.2012 | Not sanctioned – but recalled for duty. |

| | | | |
|---|---|---|---|
| 3. | Dated:07.08.2012 - 15 days. | 12.08.2012 to 26.08.2012 | Not sanctioned. |
| 4. | Dated:25.08.2012 - 31 days. | 27.08.2012 to 26.09.2012 | Not sanctioned – earlier recalling to duty stands good. |
| 5. | Dated:25.09.2012 - 15 days. | 27.09.2012 to 11.10.2012 | Not sanctioned – earlier recalling to duty stands good. |
| 6. | Dated:12.10.2012 - 31 days. | 12.10.2012 to 11.11.2012 | Not applied in prescribed leave format. |
| 7. | Dated:13.11.2012 - 31 days. | 12.11.2012 to 11.12.2012 | Not sanctioned - recalling to duty stands good. |
| 8. | Dated:18.12.2012 - 31 days. | 12.12.2012 to 11.01.2013 | |
| 9. | Dated:17.01.2013 - 48 days. | 12.01.2013 to 28.02.2013 | |
| 10. | Dated:17.06.2013 - 244 days. | 01.03.2013 to 31.10.2013 | |

ವಿಷಯವನ್ನು ಕೂಲಂಕುಷವಾಗಿ ಸಂಬಂಧಿಸಿದ ದಾಖಲಾತಿಗಳೊಂದಿಗೆ ಪರಿಶೀಲಿಸಿದ ನಂತರ ಶ್ರೀ ಅರುಣ್ ಪಂಪುಸಾ ಕಠಾರಿ, ಔಷಧ ಪರಿವೀಕ್ಷಕರು (ಗುಪ್ತವಾರ್ತೆ) ಉಪ ಔಷಧ ನಿಯಂತ್ರಕರ ಪ್ರಾದೇಶಿಕ ಕಛೇರಿ, ಮೈಸೂರು (ಪ್ರಸ್ತುತ ಅನಧಿಕೃತ ಗೈರು ಹಾಜರಿ) ಇವರು ನಿರಂತರ ಅನಧಿಕೃತ ಗೈರು ಹಾಜರಿಯಲ್ಲಿ ಉಳಿದಿದ್ದು ಅದರ ಮೇಲೆ ಶಿಸ್ತುಕ್ರಮ ಪ್ರಾರಂಭವಾದ ನಂತರ ರಜೆ ಮಂಜೂರು ಮಾಡಲು ಕೋರಿಕೆ ಸಲ್ಲಿಸುತ್ತಾ ಬಂದಿರುವುದು ರಜೆಯನ್ನು ಮಂಜೂರು ಮಾಡದೆ ಕೆಲಸಕ್ಕೆ ತಕ್ಷಣ ಹಾಜರಾಗುವಂತೆ ರಜಾ ಮಂಜೂರಾತಿ ಪ್ರಾಧಿಕಾರವು ಕಾಲಕಾಲಕ್ಕೆ ಸೂಚಿಸಿರುವುದು, ಅದನ್ನು ಆಪಾದಿತ ಸರ್ಕಾರಿ ಅಧಿಕಾರಿಯು ಪಾಲಿಸದಿರುವುದು, ಪುನ: ಪುನ: ರಜೆಯನ್ನು ಕೋರಿ ಅರ್ಜಿಗಳನ್ನು ಸಲ್ಲಿಸಿರುವುದು ಅವುಗಳನ್ನು ಮಾನ್ಯ ಮಾಡದೆ ಕೆಲಸಕ್ಕೆ ವರದಿ ಮಾಡಿಕೊಳ್ಳುವಂತೆ ಸಕ್ಷಮ ಪ್ರಾಧಿಕಾರವು ರಜೆಯನ್ನು ಮಂಜೂರು ಮಾಡದಿರುವುದು ಹಾಗೂ ಅದಕ್ಕೆ ಉತ್ತರವಾಗಿ ಆಪಾದಿತ ಸರ್ಕಾರಿ ಅಧಿಕಾರಿಯು ಕೆಲಸಕ್ಕೆ ವರದಿಸದೆ ನಿರಂತರ ಗೈರು ಹಾಜರಿಯಲ್ಲಿ ಉಳಿದಿದ್ದರೂ ರಜೆಯನ್ನು ತಿರಸ್ಕರಿಸಲಿಲ್ಲವೆಂಬ ವಾದವನ್ನು ಮುಂದಿಟ್ಟಿರುವುದು ಅವರ ಕರ್ತವ್ಯ ಲೋಪವನ್ನು ದೃಢಪಡಿಸಿರುವುದರಿಂದ ಇವರನ್ನು ಸರ್ಕಾರಿ ಸೇವೆಯಲ್ಲಿ ಮುಂದುವರಿಸುವುದು ಸೂಕ್ತವಲ್ಲವೆಂದು ಪರಿಗಣಿಸಿ ಸದರಿಯವರನ್ನು ಸರ್ಕಾರಿ ಸೇವೆಯಿಂದ ಕಡ್ಡಾಯವಾಗಿ ನಿವೃತ್ತಿಗೊಳಿಸಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 260 ಐಎಂಎಂ 2012, ಬೆಂಗಳೂರು, ದಿನಾಂಕ:11.03.2015**

ಕರ್ನಾಟಕ ನಾಗರಿಕ ಸೇವಾ (ಸಿಸಿಎ) ನಿಯಮಾವಳಿ 1957ರ ನಿಯಮ 11 ಎ ಪ್ರಕಾರ ಶ್ರೀ ಅರುಣ್ ಪಂಪುಸಾ ಕಠಾರಿ, ಔಷಧ ಪರಿವೀಕ್ಷಕರು (ಗುಪ್ತವಾರ್ತೆ) ಉಪ ಔಷಧ ನಿಯಂತ್ರಕರ ಪ್ರಾದೇಶಿಕ ಕಛೇರಿ, ಮೈಸೂರು (ಪ್ರಸ್ತುತ ಅನಧಿಕೃತ ಗೈರು ಹಾಜರಿ) ರವರ ಮೇಲೆ ಇದೇ ನಿಯಮಾವಳಿಯ ನಿಯಮ 8(vi) ರಲ್ಲಿ ನಿಗದಿಪಡಿಸಿರುವ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ದಿನಾಂಕ:12.7.12 ರಿಂದ ಜಾರಿಗೆ ಬರುವಂತೆ ವಿಧಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾ.ವೈ.ಪ. ಮತ್ತು ಸಮನ್ವಯ)

**.PR. 238**

**SC. 25**

## COMMERCE AND INDUSTRIES SECRETARIAT

**Sub:** Approval for development of National Investment and Manufacturing Zone (NIMZ) at Vasanthanarasapura, Tumakuru.

Read:
1) Government Order No. CI 315 SPI 2012, dated: 14.12.2012.
2) Proposal from KSIIDC dated: 05.07.2014 seeking approval to take up acquisition of required balance land for NIMZ, formation of SPV etc.

**PREAMBLE**:

Government of India (GoI) announced the "National Manufacturing Policy" (NMP) 2011 with the main objectives of enhancing the share of manufacturing in GDP to 25% within a decade and creating 100 million jobs. As per the Policy, "NIMZs will be developed as integrated industrial townships with State-of the Art infrastructure and land use on the basis of zoning; clean and energy efficient technology; necessary social infrastructure; skill development facilities, etc." The minimum area of land required for establishing NIMZ is 5000 hectares (12500 acres) as per the NIMZ guidelines.

It is proposed to develop NIMZ at Vasanthanarasapura, Tumakuru District which would generate direct employment to about 80,000 persons and indirect employment to about 1,60,000 persons. Department of Commerce & Industries (GoK) is nominated as the Nodal Department and Karnataka State Industrial and Infrastructure Development Corporation Limited (KSIIDC) is appointed as the Nodal Agency for the implementation of this Project.

The Department of Industrial Policy & Promotion (DIPP), Government of India (GoI) has given in-principle approval for Tumakuru NIMZ during October 2012. A detailed Application for final approval in the format prescribed along with the Techno-Economic Feasibility Report cum-Development Plan to DIPP, GoI is required to be submitted by the State Government.

State Government approved the establishment of NIMZ Tumakuru at Vasanthanarasapura, Tumakuru District vide G.O. No.CI 315 SPI 2012, dated: 14.12.2012, with explicit approval to the following components:

a) To designate Karnataka State Industrial & Infrastructure Development Corporation (KSIIDC) as the nodal agency for taking forward the NIMZ at Tumakuru.

b) To acquire the required land through Karnataka Industrial Areas Development Board (KIADB).

c) To provide water and power to the areas notified for development of NIMZ.

d) To examine and propose NIMZ Act.

e) To create a Special Purpose Vehicle for the implementation of the NIMZ.

f) To appoint consultant through transparent process for providing continuous assistance to the department as well as to the nodal agency for the implementation of the project.

g) Providing budgetary provisions as required for the development of NIMZ in consultation with Finance Department.

KSIIDC has prepared the Techno Economic Feasibility Report (TEFR) through consultants.

Out of 13327 acres of land identified for NIMZ, 2322 acres is Government land. It is estimated that acquisition cost for the balance land of 9729 acres would be about Rs.2735 crore.

Water: The total requirement of water for the project has been estimated as 95 MLD.

Further, KSIIDC requested permission to take up acquisition of balance 9729 acres of land required for NIMZ, formation of SPV and permission to file application to Government of India for final approval vide their letter dated: 05.07.2014. Government has examined the matter in detail.

Hence this order.

**GOVERNMENT ORDER NO: CI 315 SPI 2012, BENGALURU, DATED: 27.02.2015**

Under the above circumstances, the Government is pleased to accord approval for the following components with regard to development of National Investment and Manufacturing Zone at Vasanthanarasapur, Tumkur District.

(i) to forward the TEF report prepared by KSIIDC to DIPP, Govt. of India along with the application for seeking final approval from GoI.

(ii) KIADB to take up the balance land acquisition to an extent of 9729 acres by availing loan from HUDCO or any other financial institutions to an extent of Rs.2735 crore in a phased manner. Government to give guarantee to the financial institution in favour of KIADB for availing the loan. In addition, GoK to provide budgetary support to KIADB for servicing the interest cost of the loan until KIADB starts getting income from allotment of the developed land.

(iii) allocation of 95 MLD water by Water Resources Dept. from the Hemavathy Canal – Tumakuru Branch for the proposed NIMZ at Vasanthanarasapur, Tumkur District

(iv) allocation of 603 MW of power by Energy Dept./BESCOM for the proposed NIMZ at Vasanthanarasapur, Tumkur District.

v) upon receipt of the final approval from Govt. of India, incorporation of the SPV as proposed below for the implementation of the proposed NIMZ with equity participation by GoK through KSIIDC and Government of India, if any.

| Sl.No. | Board Members | Proposed Position |
|---|---|---|
| 1 | ACS/Principal Secretary to Govt., C&I Dept. | Chairman |
| 2 | Commissioner (Industries & Commerce) | Director |
| 3 | Chief Executive Officer, KIADB | Director |
| 4 | Director (Technical Cell) | Director |
| 5 | Member Secretary, KSPCB | Director |
| 6 | Nominee of DIPP, GoI | Director |
| 7 | Deputy Commissioner, Tumakuru | Director |
| 8 | Independent Industry/Sector Experts (2 Nos.) | Director(s) |
| 9 | Private Sector Partner (s) (1 No. Each) | Director (s) |
| 10 | Representative of Tumakuru NIMZ Industries Association | Director |
| 11 | Managing Director, KSIIDC | **Chief Executive Officer** |

By Order and in the name of the Governor of Karnataka,

**S. Umadevi**

Desk Officer (Technical Cell),

Commerce & Industries Department.

**PR. 208**

**SC. 25**

## ಕಾನೂನು ಸಚಿವಾಲಯ

**ವಿಷಯ:** ರಾಜ್ಯದ 176 ವಿವಿಧ ಕಂದಾಯ ತಾಲ್ಲೂಕುಗಳಲ್ಲಿ ತಲಾ ಒಂದರಂತೆ ಹೆಚ್ಚುವರಿಯಾಗಿ ನೋಟರಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಲಾ 69 ಎಲ್‌ಸಿಎಲ್ 2014,ದಿನಾಂಕ: 23-12-2014.
2. ಸರ್ಕಾರಿ ಆದೇಶ ಸಂಖ್ಯೆ:ಲಾ 68 ಎಲ್‌ಸಿಎಲ್ 2014, ದಿನಾಂಕ: 19-12-2014.
3. ಸರ್ಕಾರಿ ಆದೇಶ ಸಂಖ್ಯೆ: ಲಾ 291 ಎಲ್‌ಸಿಎಲ್ 2014, ದಿನಾಂಕ:19-12-2014.
4. ಸರ್ಕಾರಿ ಆದೇಶ ಸಂಖ್ಯೆ: ಲಾ 241 ಎಲ್‌ಸಿಎಲ್ 2014, ದಿನಾಂಕ: 12-11-2014.
5. ಸರ್ಕಾರಿ ಆದೇಶ ಸಂಖ್ಯೆ: ಲಾ 142 ಎಲ್‌ಸಿಎಲ್ 2013,ದಿನಾಂಕ: 03-11-2014.
6. ಸರ್ಕಾರಿ ಆದೇಶ ಸಂಖ್ಯೆ: ಲಾ 360 ಎಲ್‌ಸಿಎಲ್ 2014,ದಿನಾಂಕ: 30-10-2014.
7. ಸರ್ಕಾರಿ ಆದೇಶ ಸಂಖ್ಯೆ: ಲಾ 13 ಎಲ್‌ಸಿಎಲ್ 2014,ದಿನಾಂಕ: 30-10-2014.
8. ಸರ್ಕಾರಿ ಆದೇಶ ಸಂಖ್ಯೆ: ಲಾ 116 ಎಲ್‌ಸಿಎಲ್ 2014,ದಿನಾಂಕ: 30-10-2014.
9. ಸರ್ಕಾರಿ ಆದೇಶ ಸಂಖ್ಯೆ: ಲಾ 119 ಎಲ್‌ಸಿಎಲ್ 2014, ದಿನಾಂಕ: 21-10-2014.
10. ಸರ್ಕಾರಿ ಆದೇಶ ಸಂಖ್ಯೆ: ಲಾ 117 ಎಲ್‌ಸಿಎಲ್ 2014,ದಿನಾಂಕ: 21-1-2014.
11. ಸರ್ಕಾರಿ ಆದೇಶ ಸಂಖ್ಯೆ: ಲಾ 28 ಎಲ್‌ಸಿಎಲ್ 2014.ದಿನಾಂಕ: 20-10-2014.
12. ಸರ್ಕಾರಿ ಆದೇಶ ಸಂಖ್ಯೆ: ಲಾ 120 ಎಲ್‌ಸಿಎಲ್ 2014,ದಿನಾಂಕ: 21-10-2014.
13. ಸರ್ಕಾರಿ ಆದೇಶ ಸಂಖ್ಯೆ: ಲಾ 118 ಎಲ್‌ಸಿಎಲ್ 2014,ದಿನಾಂಕ: 21-10-2014.
14. ಸರ್ಕಾರಿ ಆದೇಶ ಸಂಖ್ಯೆ: ಲಾ 260 ಎಲ್‌ಸಿಎಲ್ 2014,ದಿನಾಂಕ: 28-10-2014.
15. ಸರ್ಕಾರಿ ಆದೇಶ ಸಂಖ್ಯೆ: ಲಾ 264 ಎಲ್‌ಸಿಎಲ್ 2014,ದಿನಾಂಕ: 27-10-2014.
16. ಸರ್ಕಾರಿ ಆದೇಶ ಸಂಖ್ಯೆ: ಲಾ 70 ಎಲ್‌ಸಿಎಲ್ 2014, ದಿನಾಂಕ: 27-10-2014.
17. ಸರ್ಕಾರಿ ಆದೇಶ ಸಂಖ್ಯೆ: ಲಾ 66 ಎಲ್‌ಸಿಎಲ್ 2014, ದಿನಾಂಕ: 24-11-2014.
18. ಸರ್ಕಾರಿ ಆದೇಶ ಸಂಖ್ಯೆ: ಲಾ 64 ಎಲ್‌ಸಿಎಲ್ 2014, ದಿನಾಂಕ: 10.09.2014.
19. ಸರ್ಕಾರಿ ಆದೇಶ ಸಂಖ್ಯೆ: ಲಾ 114 ಎಲ್‌ಸಿಎಲ್ 2013, ದಿನಾಂಕ: 15-07-2014.
20. ಸರ್ಕಾರಿ ಆದೇಶ ಸಂಖ್ಯೆ: ಲಾ 155 ಎಲ್‌ಸಿಎಲ್ 2013, ದಿನಾಂಕ: 24-06-2014.
21. ಸರ್ಕಾರಿ ಆದೇಶ ಸಂಖ್ಯೆ: ಲಾ 10 ಎಲ್‌ಸಿಎಲ್ 2012, ದಿನಾಂಕ: 09-06-2014.
22. ಸರ್ಕಾರಿ ಆದೇಶ ಸಂಖ್ಯೆ: ಲಾ 127 ಎಲ್‌ಸಿಎಲ್ 2013, ದಿನಾಂಕ: 09-06-2014.
23. ಸರ್ಕಾರಿ ಆದೇಶ ಸಂಖ್ಯೆ: ಲಾ 136 ಎಲ್‌ಸಿಎಲ್ 2013, ದಿನಾಂಕ: 09-06-2014.
24. ಸರ್ಕಾರಿ ಆದೇಶ ಸಂಖ್ಯೆ: ಲಾ 261 ಎಲ್‌ಸಿಎಲ್ 2014, ದಿನಾಂಕ: 28-10-2014.
25. ಸರ್ಕಾರಿ ಆದೇಶ ಸಂಖ್ಯೆ: ಲಾ 137 ಎಲ್‌ಸಿಎಲ್ 2013, ದಿನಾಂಕ: 26-09-2014.
26. ಸರ್ಕಾರಿ ಆದೇಶ ಸಂಖ್ಯೆ: ಲಾ 267 ಎಲ್‌ಸಿಎಲ್ 2014, ದಿನಾಂಕ: 12-11-2014.
27. ಸರ್ಕಾರಿ ಆದೇಶ ಸಂಖ್ಯೆ: ಲಾ 265 ಎಲ್‌ಸಿಎಲ್ 2014, ದಿನಾಂಕ: 12-11-2014
28. ಸರ್ಕಾರಿ ಆದೇಶ ಸಂಖ್ಯೆ: ಲಾ 178 ಎಲ್‌ಸಿಎಲ್ 2013, ದಿನಾಂಕ: 24-06-2014.
29. ಸರ್ಕಾರಿ ಆದೇಶ ಸಂಖ್ಯೆ: ಲಾ 204 ಎಲ್‌ಸಿಎಲ್ 2014, ದಿನಾಂಕ: 26/09/2014
30. ಸರ್ಕಾರಿ ಆದೇಶ ಸಂಖ್ಯೆ: ಲಾ 20 ಎಲ್‌ಸಿಎಲ್ 2014, ದಿನಾಂಕ: 12/11/2014

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ 01 ರಿಂದ 30 ರಲ್ಲಿನ ಸರ್ಕಾರಿ ಆದೇಶಗಳಲ್ಲಿ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದ 176 ವಿವಿಧ ಕಂದಾಯ ತಾಲ್ಲೂಕುಗಳ ಪೈಕಿ ಹೊನ್ನಾಳಿ, ಜಗಳೂರು, ಹೊಸದುರ್ಗ, ಧಾರವಾಡ, ಬೀಳಗಿ, ಚಿಕ್ಕಬಳ್ಳಾಪುರ, ಇಂಡಿ, ಚಿಂತಾಮಣಿ, ಬಾಗೇಪಲ್ಲಿ, ಶಿಡ್ಲಘಟ್ಟ, ಹೊಸಪೇಟೆ, ಗುಡಿಬಂಡೆ, ಗೌರಿಬಿದನೂರು, ರಾಣಿಬೆನ್ನೂರು, ಶಿಗ್ಗಾಂವ್, ಹರಪ್ಪನಹಳ್ಳಿ, ದಾವಣಗೆರೆ, ಚಳ್ಳಕೆರೆ, ಹೊಳಲ್ಕೆರೆ, ಜೇವರ್ಗಿ, ಬಿಜಾಪುರ, ಕಲಘಟಗಿ, ಕುಂದಗೋಳ್, ಬ್ಯಾಡಗಿ, ಜಮಖಂಡಿ, ಶಿರಹಟ್ಟಿ, ಮುಂಡರಗಿ, ಚನ್ನಗಿರಿ, ಶೋರಾಪುರ ಮತ್ತು ರೋಣ ಕಂದಾಯ ತಾಲ್ಲೂಕುಗಳಲ್ಲಿ ಈಗಾಗಲೇ ತಲಾ ಒಂದರಂತೆ ನೋಟರಿ ಹುದ್ದೆಗಳನ್ನು ಸೃಜಿಸಲಾಗಿರುತ್ತದೆ.

ಸಾರ್ವಜನಿಕ ಹಿತದೃಷ್ಟಿಯಿಂದ ಹಾಗೂ ಸಚಿವರುಗಳು ಮತ್ತು ಶಾಸಕರುಗಳ ಕೋರಿಕೆಗಳ ಹಿನ್ನೆಲೆಯಲ್ಲಿ ರಾಜ್ಯದ 176 ಕಂದಾಯ ತಾಲ್ಲೂಕುಗಳಲ್ಲಿ ತಲಾ ಒಂದರಂತೆ ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಲು ನೋಟರಿ ನಿಯಮಾವಳಿಗಳು 1956ರ ನಿಯಮ 8(4-ಎ) ರನ್ವಯ ರಾಜ್ಯ ಸರ್ಕಾರದ ನೋಟರಿ ವೃಂದ ಬಲವನ್ನು ಹೆಚ್ಚಿಸಿ ತುಂಬಲು ಸರ್ಕಾರವು ನಿರ್ಧರಿಸಿದೆ.

ಆ ಮೇರೆಗೆ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 187 ಎಲ್‌ಸಿಎಲ್ 2013,ಬೆಂಗಳೂರು, ದಿನಾಂಕ: 19.02.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದ 176 ವಿವಿಧ ಕಂದಾಯ ತಾಲ್ಲೂಕುಗಳ ಪೈಕಿ ಹೊನ್ನಾಳಿ, ಜಗಳೂರು, ಹೊಸದುರ್ಗ, ಧಾರವಾಡ, ಬೀಳಗಿ, ಚಿಕ್ಕಬಳ್ಳಾಪುರ, ಇಂಡಿ, ಚಿಂತಾಮಣಿ, ಬಾಗೇಪಲ್ಲಿ, ಶಿಡ್ಲಘಟ್ಟ, ಹೊಸಪೇಟೆ, ಗುಡಿಬಂಡೆ, ಗೌರಿಬಿದನೂರು, ರಾಣಿಬೆನ್ನೂರು, ಶಿಗ್ಗಾಂವ್, ಹರಪ್ಪನಹಳ್ಳಿ, ದಾವಣಗೆರೆ, ಚಳ್ಳಕೆರೆ, ಹೊಳಲ್ಕೆರೆ, ಜೇವರ್ಗಿ, ಬಿಜಾಪುರ, ಕಲಘಟಗಿ, ಕುಂದಗೋಳ್, ಬ್ಯಾಡಗಿ, ಜಮಖಂಡಿ, ಶಿರಹಟ್ಟಿ, ಮುಂಡರಗಿ, ಚನ್ನಗಿರಿ, ಶೋರಾಪುರ ಮತ್ತು ರೋಣ ಕಂದಾಯ ತಾಲ್ಲೂಕುಗಳಲ್ಲಿ ತಲಾ ಒಂದರಂತೆ 30 ಹೆಚ್ಚುವರಿ ನೋಟರಿ ಹುದ್ದೆಗಳನ್ನು ಸೃಜಿಸಲಾಗಿರುತ್ತದೆ. ಇನ್ನುಳಿದಂತೆ ಅನುಬಂಧದಲ್ಲಿ ಲಗತ್ತಿಸಿರುವ 146 ವಿವಿಧ ಕಂದಾಯ ತಾಲ್ಲೂಕುಗಳಗೆ ತಲಾ ಒಂದರಂತೆ 146 ಹೆಚ್ಚುವರಿ ನೋಟರಿ ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಅನುಬಂಧದಲ್ಲಿರುವ 146 ವಿವಿಧ ಕಂದಾಯ ತಾಲ್ಲೂಕುಗಳಿಗೆ ಆಯಾಯ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು/ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ನೋಟರಿ ಹುದ್ದೆಗಳನ್ನು ತುಂಬಲು ನೋಟರಿಗಳ ಅಧಿನಿಯಮ / ನಿಯಮಗಳನ್ವಯ ಅಧಿಸೂಚನೆ ಹೊರಡಿಸಿ ಸ್ಥಳೀಯ ಜಾಹಿರಾತು ನೀಡಿ, ಆ ಮೂಲಕ ಸ್ವೀಕರಿಸಿದ ಅರ್ಜಿಗಳನ್ನು ನೋಟರಿಗಳ ನಿಯಮಗಳು 1956ರ ನಿಯಮ 6(1)(2) ಮತ್ತು 7(1)(2)(3)ರನ್ವಯ ಹಾಗೂ ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತುಗಳು) ನಿಯಮಗಳು 1977ರ ನಿಯಮ 12 ರನ್ವಯ ಪರಿಶೀಲಿಸಿ, ನೋಟರಿ ನಿಯಮಗಳನ್ವಯ ಅರ್ಜಿದಾರರು ಬಾರ್ ಕೌನ್ಸಿಲ್‌ನಲ್ಲಿ ನೊಂದಾಯಿಸಿದ ಜೇಷ್ಠತೆಗನುಸಾರ ವಿವರವಾದ ವರದಿಗಳೊಂದಿಗೆ ಅಧಿಸೂಚನೆಯನ್ನು ಹೊರಡಿಸಿ ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವನ್ನು ನಿಗದಿಪಡಿಸಿ, ಆ ಮೇರೆಗೆ ಸ್ವೀಕರಿಸುವ ಅರ್ಜಿಗಳನ್ನು ಪರಿಶೀಲಿಸಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಕೋರಿದೆ.

ಫಾರಂ 01 ಮೆಮೋರಿಯಲ್ (ರೂಲ್ 4(2) ರನ್ವಯ (ಪ್ರತಿ ಲಗತ್ತಿಸಿದೆ) ಅರ್ಜಿದಾರರು ವಿವರಗಳನ್ನು ಭರ್ತಿ ಮಾಡಿದ ದಾಖಲೆಗಳೊಂದಿಗೆ ಸಹಿಗಳನ್ನು ಕಡ್ಡಾಯವಾಗಿ ಮಾಡಿಸಿ ಕಳುಹಿಸುವುದು ಹಾಗೂ ಸರಿಯಾಗಿ ಭರ್ತಿಮಾಡದ ಮೆಮೋರಿಯಲ್‌ಗಳನ್ನು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ/ಜಿಲ್ಲಾ ನ್ಯಾಯಾಧೀಶರ ಹಂತದಲ್ಲಿಯೇ ರದ್ದುಗೊಳಿಸುವಂತೆ ಕೋರಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ. ಲಕ್ಷ್ಮಣ**

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ)

ಕಾನೂನು ಇಲಾಖೆ (ಆಡಳಿತ–2).

**ಅನುಬಂಧ**

**ಸರ್ಕಾರದ ಆದೇಶ ಸಂಖ್ಯೆ: ಲಾ 187 ಎಲ್‌ಸಿಎಲ್ 2013, ದಿನಾಂಕ: 19–02–2015**

| ಕ್ರ.ಸಂ. | ಜಿಲ್ಲೆಗಳ ಹೆಸರು | ಕಂದಾಯ ತಾಲ್ಲೂಕುಗಳ ಹೆಸರು | ಸೃಜಿಸಲಾಗಿರುವ ನೋಟರಿ ಹುದ್ದೆಗಳ ಸಂಖ್ಯೆ |
|---|---|---|---|
| 1) | **ಬೆಂಗಳೂರು ನಗರ ಜಿಲ್ಲೆ** | 1) ಬೆಂಗಳೂರು (ಉತ್ತರ) | ತಲಾ ಒಂದರಂತೆ |
| | | 2) ಬೆಂಗಳೂರು (ದಕ್ಷಿಣ) | “ |
| | | 3) ಆನೇಕಲ್ | “ |
| | | 4) ಕೆ.ಆರ್. ಪುರಂ | “ |
| 2) | **ಬೆಂಗಳೂರು ಗ್ರಾಮಾಂತರ ಜಿಲ್ಲೆ** | 1) ದೇವನಹಳ್ಳಿ | ತಲಾ ಒಂದರಂತೆ |
| | | 2) ಹೊಸಕೋಟೆ | “ |
| | | 3) ನೆಲಮಂಗಲ | “ |
| | | 4) ದೊಡ್ಡಬಳ್ಳಾಪುರ | “ |
| 3) | **ರಾಮನಗರ ಜಿಲ್ಲೆ** | 1) ರಾಮನಗರ | ತಲಾ ಒಂದರಂತೆ |
| | | 2) ಕನಕಪುರ | “ |
| | | 3) ಮಾಗಡಿ | “ |
| | | 4) ಚನ್ನಪಟ್ಟಣ | “ |
| 4) | **ಚಿತ್ರದುರ್ಗ ಜಿಲ್ಲೆ** | 1) ಚಿತ್ರದುರ್ಗ | ತಲಾ ಒಂದರಂತೆ |
| | | 2) ಹಿರಿಯೂರು | “ |
| | | 3) ಮೊಳಕಾಲ್ಮೂರು | “ |
| 5) | **ದಾವಣಗೆರೆ ಜಿಲ್ಲೆ** | ಹರಿಹರ | ತಲಾ ಒಂದರಂತೆ |
| 6) | **ಕೋಲಾರ ಜಿಲ್ಲೆ** | 1) ಕೋಲಾರ | ತಲಾ ಒಂದರಂತೆ |
| | | 2) ಬಂಗಾರಪೇಟೆ | “ |
| | | 3) ಮಾಲೂರು | “ |
| | | 4) ಮುಳಬಾಗಿಲು | “ |
| | | 5) ಶ್ರೀನಿವಾಸಪುರ | “ |

| | | | |
|---|---|---|---|
| **7)** | **ಶಿವಮೊಗ್ಗ ಜಿಲ್ಲೆ** | 1) ಶಿವಮೊಗ್ಗ | ತಲಾ ಒಂದರಂತೆ |
| | | 2) ತೀರ್ಥಹಳ್ಳಿ | " |
| | | 3) ಹೊಸನಗರ | " |
| | | 4) ಶಿಕಾರಿಪುರ | " |
| | | 5) ಸಾಗರ | " |
| | | 6) ಸೊರಬ | " |
| | | 7) ಭದ್ರಾವತಿ | " |
| **8)** | **ತುಮಕೂರು ಜಿಲ್ಲೆ** | 1) ತುಮಕೂರು | ತಲಾ ಒಂದರಂತೆ |
| | | 2) ಗುಬ್ಬಿ | " |
| | | 3) ಕೊರಟಗೆರೆ | " |
| | | 4) ಮಧುಗಿರಿ | " |
| | | 5) ಚಿಕ್ಕನಾಯಕನಹಳ್ಳಿ | " |
| | | 6) ತುರುವೇಕೆರೆ | " |
| | | 7) ಕುಣಿಗಲ್ | " |
| | | 8) ಪಾವಗಡ | " |
| | | 9) ಶಿರಾ | " |
| | | 10) ತಿಪಟೂರು | " |
| **9)** | **ಮೈಸೂರು ಜಿಲ್ಲೆ** | 1) ಮೈಸೂರು | ತಲಾ ಒಂದರಂತೆ |
| | | 2) ಟಿ.ನರಸೀಪುರ | " |
| | | 3) ನಂಜನಗೂಡು | " |
| | | 4) ಹೆಚ್.ಡಿ.ಕೋಟೆ | " |
| | | 5) ಪಿರಿಯಾಪಟ್ಟಣ | " |
| | | 6) ಹುಣಸೂರು | " |
| | | 7) ಕೆ.ಆರ್.ನಗರ | " |
| **10)** | **ಚಾಮರಾಜನಗರ ಜಿಲ್ಲೆ** | 1) ಚಾಮರಾಜನಗರ | ತಲಾ ಒಂದರಂತೆ |
| | | 2) ಕೊಳ್ಳೆಗಾಲ | " |
| | | 3) ಗುಂಡ್ಲುಪೇಟೆ | " |
| | | 4) ಯಳಂದೂರು | " |
| **11)** | **ಮಂಡ್ಯ ಜಿಲ್ಲೆ** | 1) ಮಂಡ್ಯ | ತಲಾ ಒಂದರಂತೆ |
| | | 2) ಮದ್ದೂರು | " |
| | | 3) ಮಳವಳ್ಳಿ | " |
| | | 4) ಪಾಂಡವಪುರ | " |
| | | 5) ಕೆ.ಆರ್.ಪೇಟೆ | " |
| | | 6) ಶ್ರೀರಂಗಪಟ್ಟಣ | " |
| | | 7) ನಾಗಮಂಗಲ | " |
| **12)** | **ಕೊಡಗು ಜಿಲ್ಲೆ** | 1) ಮಡಿಕೇರಿ | ತಲಾ ಒಂದರಂತೆ |
| | | 2) ವೀರಾಜಪೇಟೆ | " |
| | | 3) ಸೋಮವಾರಪೇಟೆ | " |
| **13)** | **ದಕ್ಷಿಣ ಕನ್ನಡ ಜಿಲ್ಲೆ** | 1) ಮಂಗಳೂರು | ತಲಾ ಒಂದರಂತೆ |
| | | 2) ಬಂಟ್ವಾಳ | " |
| | | 3) ಪುತ್ತೂರು | " |
| | | 4) ಸುಳ್ಯ | " |
| | | 5) ಬೆಳ್ತಂಗಡಿ | " |
| **14)** | **ಉಡುಪಿ ಜಿಲ್ಲೆ** | 1) ಉಡುಪಿ | ತಲಾ ಒಂದರಂತೆ |
| | | 2) ಕುಂದಾಪುರ | " |
| | | 3) ಕಾರ್ಕಳ | " |

| | | | |
|---|---|---|---|
| **15)** | **ಚಿಕ್ಕಮಗಳೂರು ಜಿಲ್ಲೆ** | 1) ಚಿಕ್ಕಮಗಳೂರು | ತಲಾ ಒಂದರಂತೆ |
| | | 2) ಕಡೂರು | " |
| | | 3) ತರಿಕೆರೆ | " |
| | | 4) ಮೂಡಿಗೇರೆ | " |
| | | 5) ಶೃಂಗೇರಿ | " |
| | | 6) ಕೊಪ್ಪ | " |
| | | 7) ಎನ್.ಆರ್.ಪುರ | " |
| **16)** | **ಹಾಸನ ಜಿಲ್ಲೆ** | 1) ಹಾಸನ | ತಲಾ ಒಂದರಂತೆ |
| | | 2) ಅರಸೀಕೆರೆ | " |
| | | 3) ಆಲೂರು | " |
| | | 4) ಬೇಲೂರು | " |
| | | 5) ಸಕಲೇಶಪುರ | " |
| | | 6) ಅರಕಲಗೂಡು | " |
| | | 7) ಹೊಳೆನರಸೀಪುರ | " |
| | | 8) ಚನ್ನರಾಯಪಟ್ಟಣ | " |
| **17)** | **ಉತ್ತರ ಕನ್ನಡ ಜಿಲ್ಲೆ** | 1) ಕಾರವಾರ | ತಲಾ ಒಂದರಂತೆ |
| | | 2) ಸಿರಸಿ | " |
| | | 3) ಸಿದ್ದಾಪುರ | " |
| | | 4) ಅಂಕೋಲಾ | " |
| | | 5) ಯಲ್ಲಾಪುರ | " |
| | | 6) ಹಳಿಯಾಳ | " |
| | | 7) ಭಟ್ಕಳ | " |
| | | 8) ಕುಮಟಾ | " |
| | | 9) ಹೊನ್ನಾವರ | " |
| | | 10) ಜೋಯಿಡಾ | " |
| | | 11) ಮುಂಡಗೋಡು | " |
| **18)** | **ಹಾವೇರಿ ಜಿಲ್ಲೆ** | 1) ಹಾವೇರಿ | ತಲಾ ಒಂದರಂತೆ |
| | | 2) ಸವಣೂರು | " |
| | | 3) ಹಿರೆಕೇರೂರು | " |
| | | 4) ಹಾನಗಲ್ | " |
| **19)** | **ಧಾರವಾಡ ಜಿಲ್ಲೆ** | 1) ಹುಬ್ಬಳ್ಳಿ | ತಲಾ ಒಂದರಂತೆ |
| | | 2) ನವಲಗುಂದ | " |
| | | | " |
| **20)** | **ಗದಗ ಜಿಲ್ಲೆ** | 1) ಗದಗ | ತಲಾ ಒಂದರಂತೆ |
| | | 2) ನರಗುಂದ | " |
| **21)** | **ಬೆಳಗಾವಿ ಜಿಲ್ಲೆ** | 1) ಬೆಳಗಾವಿ | ತಲಾ ಒಂದರಂತೆ |
| | | 2) ಖಾನಾಪುರ | " |
| | | 3) ಬೈಲಹೊಂಗಲ | " |
| | | 4) ಸೌದತ್ತಿ | " |
| | | 5) ರಾಮದುರ್ಗ | " |
| | | 6) ಗೋಕಾಕ | " |
| | | 7) ಚಿಕ್ಕೋಡಿ | " |
| | | 8) ಹುಕ್ಕೇರಿ | " |
| | | 9) ರಾಯಬಾಗ | " |
| | | 10) ಅಥಣಿ | " |

| | | | |
|---|---|---|---|
| **22)** | **ಬಾಗಲಕೋಟೆ ಜಿಲ್ಲೆ** | 1) ಬಾಗಲಕೋಟೆ<br>2) ಹುನಗುಂದ<br>3) ಬಾದಾಮಿ<br>4) ಮುಧೋಳ | ತಲಾ ಒಂದರಂತೆ<br>"<br>"<br>" |
| **23)** | **ಬಿಜಾಪುರ ಜಿಲ್ಲೆ** | 1) ಸಿಂಧಗಿ<br>೨) ಬಸವನಬಾಗೇವಾಡಿ<br>೩) ಮುದ್ದೇಬಿಹಾಳ | ತಲಾ ಒಂದರಂತೆ<br>"<br>" |
| **24)** | **ಬೀದರ್ ಜಿಲ್ಲೆ** | 1) ಬೀದರ್<br>2) ಔರಾದ್<br>3) ಭಾಲ್ಕಿ<br>4) ಹುಮನಾಬಾದ್<br>5) ಬಸವಕಲ್ಯಾಣ | ತಲಾ ಒಂದರಂತೆ<br>"<br>"<br>"<br>" |
| **25)** | **ಕಲಬುರ್ಗಿ ಜಿಲ್ಲೆ** | 1) ಕಲಬುರ್ಗಿ<br>2) ಚಿಂಚೋಳಿ<br>3) ಸೇಡಂ<br>4) ಚಿತ್ತಾಪುರ<br>5) ಆಳಂದ<br>6) ಅಫಜಲ್‌ಪುರ | ತಲಾ ಒಂದರಂತೆ<br>"<br>"<br>"<br>"<br>" |
| **26)** | **ಯಾದಗಿರಿ ಜಿಲ್ಲೆ** | 1) ಯಾದಗಿರಿ<br>2) ಶಹಪುರ | ತಲಾ ಒಂದರಂತೆ<br>" |
| **27)** | **ರಾಯಚೂರು ಜಿಲ್ಲೆ** | 1) ರಾಯಚೂರು<br>2) ದೇವದುರ್ಗ<br>3) ಮಾನ್ವಿ<br>4) ಲಿಂಗಸುಗೂರು<br>5) ಸಿಂಧನೂರು | ತಲಾ ಒಂದರಂತೆ<br>"<br>"<br>"<br>" |
| **28)** | **ಕೊಪ್ಪಳ ಜಿಲ್ಲೆ** | 1) ಕೊಪ್ಪಳ<br>2) ಗಂಗಾವತಿ<br>3) ಯಲಬುರ್ಗಾ<br>4) ಕುಷ್ಟಗಿ | ತಲಾ ಒಂದರಂತೆ<br>"<br>"<br>" |
| **29)** | **ಬಳ್ಳಾರಿ ಜಿಲ್ಲೆ** | 1) ಬಳ್ಳಾರಿ<br>2) ಸಿರಗುಪ್ಪ<br>3) ಸಂಡೂರು<br>4) ಕೂಡ್ಲಿಗಿ<br>5) ಹಗರಿಬೊಮ್ಮನಹಳ್ಳಿ<br>6) ಹೂವಿನ ಹಡಗಲಿ | ತಲಾ ಒಂದರಂತೆ<br>"<br>"<br>"<br>"<br>"<br>" |

**ಜೆ. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ)
ಕಾನೂನು ಇಲಾಖೆ (ಆಡಳಿತ–2).

**PR. 193**
**SC. 200**

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ:–** ಮೀನುಗಾರಿಕಾ ದೋಣಿಗಳ ನಿರ್ಮಾಣಕ್ಕೆ ಸಾಧ್ಯತಾ ಪತ್ರ ನೀಡುವ ಬಗ್ಗೆ.

**ಓದಲಾಗಿದೆ:–** 1) ಆದೇಶ ಸಂಖ್ಯೆ: ಎಹೆಚ್‌ಎಫ್/481/ಎಸ್‌ಎಫ್‌ಎಮ್/94 ದಿನಾಂಕ: 15–12–1994.

2) ಆದೇಶ ಸಂಖ್ಯೆ: ಪಸಂಮೀ/114/ಮೀಇಯೋ/2009 ದಿನಾಂಕ: 23–06–2009.

3) ಆದೇಶ ಸಂಖ್ಯೆ: ಪಸಂಮೀ/208/ಮೀಇಯೋ/2009, ದಿನಾಂಕ: 04–11–2009.

4) ಆದೇಶ ಸಂಖ್ಯೆ: ಪಸಂಮೀ/142/ಮೀಇಯೋ/2014 ದಿನಾಂಕ: 10–09–2014.

5) ಮಾನ್ಯ ಶಾಸಕರು, ಬೈಂದೂರು ವಿಧಾನಸಭಾ ಕ್ಷೇತ್ರ ಇವರು ಮಾನ್ಯ ಮುಖ್ಯಮಂತ್ರಿಗಳಿಗೆ ಬರೆದ ಪತ್ರ ದಿನಾಂಕ: 05-12-2014.

6) ಮಾನ್ಯ ಶಾಸಕರು, ಉಡುಪಿ ವಿಧಾನಸಭಾ ಕ್ಷೇತ್ರ ಇವರು ಮಾನ್ಯ ಮುಖ್ಯಮಂತ್ರಿಗಳಿಗೆ ಬರೆದ ಪತ್ರ ದಿನಾಂಕ: 23-12-2014.

7) ಸರ್ಕಾರದ ಪತ್ರ ಸಂಖ್ಯೆ: ಪಸಂಮೀ/213/ಮೀಇಯೋ/2014, ದಿನಾಂಕ: 23-01-2015.

8) ಪತ್ರ ಸಂಖ್ಯೆ: ಡಿಫ್/13/ಎಂಇಎಫ್/2015, ದಿನಾಂಕ: 11-02-2015 ಮತ್ತು 20-02-2015.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1), (2) ಮತ್ತು (3)ರಲ್ಲಿ ಓದಲಾದ ಆದೇಶಗಳಲ್ಲಿ, 48 ಅಡಿಗಿಂತ ಹೆಚ್ಚಿನ ಉದ್ದದ ಯಾಂತ್ರಿಕ ದೋಣಿಗಳ ನಿರ್ಮಾಣಕ್ಕೆ ಸಾಧ್ಯತಾ ಪತ್ರವನ್ನು ನೀಡುವ ಗುರಿಯನ್ನು ಪ್ರತಿವರ್ಷಕ್ಕೆ ದಕ್ಷಿಣ ಕನ್ನಡ-100, ಉಡುಪಿ-100 ಹಾಗೂ ಉತ್ತರ ಕನ್ನಡ-25 ರಂತೆ ನಿಗದಿಪಡಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಆದೇಶದಲ್ಲಿ, ಕರಾವಳಿ ಜಿಲ್ಲೆಗಳಲ್ಲಿ 48 ಅಡಿಗಿಂತ ಹೆಚ್ಚಿನ ಉದ್ದದ ಯಾಂತ್ರಿಕ ದೋಣಿಗಳು ನಿರ್ಮಿಸಲು ಕೆಲವೊಂದು ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಉಡುಪಿ ಜಿಲ್ಲೆಗೆ – 150, ದಕ್ಷಿಣ ಕನ್ನಡ ಜಿಲ್ಲೆಗೆ – 100 ಮತ್ತು ಉತ್ತರ ಕನ್ನಡ ಜಿಲ್ಲೆಗೆ – 25 ಸಾಧ್ಯತಾ ಪತ್ರಗಳನ್ನು ನೀಡಲು ಆದೇಶಿಸಿದೆ.

ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಮಾನ್ಯ ಶಾಸಕರ ಪತ್ರದಲ್ಲಿ, ಕುಂದಾಪುರ ತಾಲ್ಲೂಕಿನ ಯಾಂತ್ರೀಕೃತ ಬೋಟ್‌ಗಳ ನಿರ್ಮಾಣಕ್ಕೆ ಸಾಧ್ಯತಾ ಪತ್ರ ಕೋರಿ ಸಲ್ಲಿಸಿರುವ 60 ಅರ್ಜಿಗಳಿಗೂ ಸಾಧ್ಯತಾ ಪತ್ರ ನೀಡಬೇಕೆಂದು ಕೋರಿದ್ದು, ಸದರಿ ಪತ್ರದ ಮೇಲೆ ಮಾನ್ಯ ಮುಖ್ಯಮಂತ್ರಿಯವರು "ನಿರ್ದೇಶಕರು, ಮೀನುಗಾರಿಕೆ ಇಲಾಖೆ, ಇಲ್ಲಿ ಸೂಚಿಸಿರುವಂತೆ ಕ್ರಮ ತೆಗೆದುಕೊಳ್ಳುವುದು" ಎಂದು ಆದೇಶಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ಮಾನ್ಯ ಶಾಸಕರ ಪತ್ರದಲ್ಲಿ, ಸರ್ಕಾರದಿಂದ ನಿಗದಿಪಡಿಸಿದಂತೆ 150 ಸಾಧ್ಯತಾ ಪತ್ರಗಳನ್ನು ಹಾಲಿ ನಿರ್ವಹಿಸುತ್ತಿರುವ ಮಾನದಂಡದಲ್ಲಿಯೇ ನೀಡುವಂತೆ ಸೂಚನೆ ನೀಡಬೇಕೆಂದು ಕೋರುತ್ತಾ, ಉಡುಪಿ ಜಿಲ್ಲೆಯಲ್ಲಿ 450 ಕ್ಕಿಂತಲೂ ಹೆಚ್ಚಿಗೆ ಅರ್ಜಿಗಳು ಸಾಧ್ಯತಾ ಪ್ರಮಾಣ ಪತ್ರ ನೀಡಲು ಬಾಕಿ ಇರುವುದರಿಂದ, ಹೆಚ್ಚುವರಿಯಾಗಿ 150 ಸಾಧ್ಯತಾ ಪ್ರಮಾಣ ಪತ್ರಗಳನ್ನು ನೀಡಲು ಕೋರಿದ್ದು, ಸದರಿ ಪತ್ರದ ಮೇಲೆ ಮಾನ್ಯ ಮುಖ್ಯಮಂತ್ರಿಯವರು ಪ್ರಕಾರ್ಯದರ್ಶಿ, ಮೀನುಗಾರಿಕೆ ಇಲಾಖೆ, ಉಡುಪಿ ತಾಲ್ಲೂಕಿಗೆ (100) ಸಾಧ್ಯತಾ ಪ್ರಮಾಣ ಪತ್ರಗಳು ನೀಡುವುದು" ಎಂದು ಆದೇಶಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ಪತ್ರದಲ್ಲಿ, ಆದೇಶ ಸಂಖ್ಯೆ: ಪಸಂಮೀ/142/ಮೀಇಯೋ/2014, ದಿನಾಂಕ: 10-09-2014ರ ಆದೇಶದಲ್ಲಿನ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಉಡುಪಿ ಜಿಲ್ಲೆಗೆ ನಿಗದಿಪಡಿಸಿರುವ 150 ಸಾಧ್ಯತಾ ಪತ್ರ ನೀಡುವ ಗುರಿಯಲ್ಲಿ ಉಡುಪಿ ತಾಲ್ಲೂಕಿಗೆ 90 ಹಾಗೂ ಕುಂದಾಪುರ ತಾಲ್ಲೂಕಿಗೆ 60 ಸಾಧ್ಯತಾ ಪತ್ರಗಳನ್ನು ನೀಡಲು ಅನುಮತಿ ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (8)ರಲ್ಲಿ ಓದಲಾದ ನಿರ್ದೇಶಕರು, ಮೀನುಗಾರಿಕೆ ಇಲಾಖೆ ಇವರ ಪತ್ರಗಳಲ್ಲಿ, Revalidating the Potential of Fishery Resources in Indian EEZ ನ ಬಗ್ಗೆ ತಜ್ಞರ ವರದಿಯಲ್ಲಿ, ಎಲ್ಲಾ ರಾಜ್ಯಗಳಿಗೆ ಇರಬಹುದಾದ Optimum Fleet Size ಅನ್ನು ನಿಗದಿಪಡಿಸಿದ್ದು, ಅದರಂತೆ, ರಾಜ್ಯದ ಕರಾವಳಿಯಲ್ಲಿ 2182 ಯಾಂತ್ರೀಕೃತ ದೋಣಿಗಳು ಕಾರ್ಯಾಚರಣೆ ಮಾಡಬಹುದೆಂದು ಶಿಫಾರಸ್ಸು ಮಾಡಲಾಗಿದೆ. ಇದರಲ್ಲಿ 1312 ಯಾಂತ್ರೀಕೃತ ಬಹುದಿನಗಳ ಟ್ರಾಲರ್ ದೋಣಿಗಳಾಗಿವೆ.

ರಾಜ್ಯದಲ್ಲಿ ಇದುವರೆಗೂ 3776 ಯಾಂತ್ರೀಕೃತ ದೋಣಿಗಳನ್ನು ನೋಂದಾಯಿಸಲಾಗಿದ್ದು, ಇವುಗಳಲ್ಲಿ 240 ಹೆಚ್.ಪಿ.ಗಿಂತ ಹೆಚ್ಚಿನ ಅಶ್ವಶಕ್ತಿಯನ್ನು ಹೊಂದಿರುವ ಸುಮಾರು 800 ಬಹುದಿನಗಳ ಟ್ರಾಲರ್ ದೋಣಿಗಳಿವೆ. ಈಗ 2014-15ನೇ ಸಾಲಿನಲ್ಲಿ ನೀಡಲಾಗಿರುವ ಸಾಧ್ಯತಾ ಪತ್ರದಂತೆ 275 ದೋಣಿಗಳು ಹೊಸದಾಗಿ ಸೇರ್ಪಡೆಯಾಗುತ್ತವೆ. ಇದರಿಂದ ರಾಜ್ಯದಲ್ಲಿ ಯಾಂತ್ರೀಕೃತ ದೋಣಿಗಳ ಸಂಖ್ಯೆ 4051ಕ್ಕೆ ಹೆಚ್ಚುತ್ತದೆ ಎಂದು ತಿಳಿಸಿರುತ್ತಾರೆ. ಸಾಧ್ಯತಾ ಪತ್ರ ಕೋರಿ ಸ್ವೀಕೃತವಾದ ಅರ್ಜಿಗಳ ವಿವರಗಳನ್ನು ಕೆಳಕಂಡಂತೆ ಸಲ್ಲಿಸಿರುತ್ತಾರೆ.

ದಿನಾಂಕ: 10-09-2014 ರ ತನಕ ಸ್ವೀಕೃತವಾದ ಅರ್ಜಿಗಳು:

| ಜಿಲ್ಲೆ | ತಾಲ್ಲೂಕು | ಸ್ವೀಕೃತವಾದ ಅರ್ಜಿಗಳು | ಅರ್ಹ ಅರ್ಜಿಗಳು | ತಿರಸ್ಕೃತ ಅರ್ಜಿಗಳು |
|---|---|---|---|---|
| ದಕ್ಷಿಣ ಕನ್ನಡ | | 178 | 94 | 84 |
| ಉಡುಪಿ | ಉಡುಪಿ | 471 | 200 | 271 |
| | ಕುಂದಾಪುರ | 41 | 18 | 23 |
| ಉತ್ತರ ಕನ್ನಡ | | 43 | 24 | 19 |

ದಿನಾಂಕ: 10-09-2014 ರ ನಂತರ ಸ್ವೀಕೃತವಾದ ಅರ್ಜಿಗಳು:

| ಜಿಲ್ಲೆ | ತಾಲ್ಲೂಕು | ಸ್ವೀಕೃತವಾದ ಅರ್ಜಿಗಳು | ಅರ್ಹ ಅರ್ಜಿಗಳು | ತಿರಸ್ಕೃತ ಅರ್ಜಿಗಳು |
|---|---|---|---|---|
| ದಕ್ಷಿಣ ಕನ್ನಡ | | 182 | 171 | 11 |
| ಉಡುಪಿ | ಉಡುಪಿ | 52 | 49 | 3 |
| | ಕುಂದಾಪುರ | 70 | 70 | – |
| ಉತ್ತರ ಕನ್ನಡ | | 32 | 21 | 11 |

ಮುಂದುವರೆದು, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 110 ಅರ್ಜಿಗಳು, ಉಡುಪಿ ಜಿಲ್ಲೆಯಲ್ಲಿ 421 ಅರ್ಜಿಗಳು ಹಾಗೂ ಉತ್ತರ ಕನ್ನಡ ಜಿಲ್ಲೆಯಲ್ಲಿ 50 ಅರ್ಜಿಗಳು ಸಾಧ್ಯತಾ ಪತ್ರ ನೀಡಲು ಬಾಕಿ ಇರುವುದಾಗಿ ತಿಳಿಸುತ್ತಾ, ಮೀನುಗಾರರ ಬೇಡಿಕೆಯನ್ನು ಆಧರಿಸಿ, ಕೆಳಕಂಡಂತೆ ಹೆಚ್ಚುವರಿ ಸಾಧ್ಯತಾ ಪತ್ರಗಳನ್ನು ನೀಡಲು ಕೋರಿರುತ್ತಾರೆ.

| | |
|---|---|
| ದಕ್ಷಿಣ ಕನ್ನಡ ಜಿಲ್ಲೆ | 50 |
| ಉಡುಪಿ ಜಿಲ್ಲೆ(ಇದರಲ್ಲಿ ಉಡುಪಿ ತಾಲ್ಲೂಕು: 100) | 150 |
| ಉತ್ತರ ಕನ್ನಡ ಜಿಲ್ಲೆ | 50 |
| **ಒಟ್ಟು** | **250** |

ಪ್ರಸ್ತುತ ಹೊಸದಾಗಿ ಸಾಧ್ಯತಾ ಪತ್ರ ಕೋರಿ ಬಂದಿರುವ ಅರ್ಜಿಗಳು 15 ಮೀಟರ್‌ಗಿಂತ ಹೆಚ್ಚಿನ ಉದ್ದದ ಬಹುದಿನಗಳ ಟ್ರಾಲರ್ ದೋಣಿ ನಿರ್ಮಿಸುವ ಉದ್ದೇಶವನ್ನು ಹೊಂದಿರುವುದರಿಂದ, 15 ಮೀಟರ್ ಹೆಚ್ಚಿನ ಉದ್ದದ ದೋಣಿಗಳಿಗೆ ದಿನಾಂಕ: 10-09-2014 ರ ಆದೇಶದಲ್ಲಿ ವಿಧಿಸಲಾದ ಷರತ್ತುಗಳೊಂದಿಗೆ ಈ ಕೆಳಕಂಡ ಹೆಚ್ಚುವರಿ ಷರತ್ತಗಳನ್ನು ವಿಧಿಸಬಹುದಾಗಿದೆ ಎಂದು ನಿರ್ದೇಶಕರು ಅಭಿಪ್ರಾಯಿಸಿರುತ್ತಾರೆ.

(1) 12 ನಾಟಿಕಲ್ ಮೈಲಿಗಿಂತ ಆಚೆಯ ಪ್ರದೇಶವು ಕೇಂದ್ರ ಸರ್ಕಾರದ ಆಡಳಿತ ವ್ಯಾಪ್ತಿಗೆ ಒಳಪಡುವುದರಿಂದ ಕೇಂದ್ರ ಸರ್ಕಾರದಿಂದ LOP (Letter of Permission) ಪಡೆಯುವುದು.

(2) ಕೇಂದ್ರ ಸರ್ಕಾರದ ಆದೇಶದಂತೆ 12 ನಾಟಿಕಲ್ ಮೈಲಿನಿಂದ ಹೊರಗೆ ಬುಲ್ ಟ್ರಾಲಿಂಗ್‌ನ ಮೂಲಕ ಮೀನುಗಾರಿಕೆಗೆ ಅವಕಾಶವಿರುವುದಿಲ್ಲ.

ಮೀನುಗಾರಿಕೆ ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಉಡುಪಿ ಜಿಲ್ಲೆಯ ಉಡುಪಿ ತಾಲ್ಲೂಕಿನಲ್ಲಿ ಹೊಸ ಮೀನುಗಾರಿಕಾ ದೋಣಿಗಳನ್ನು ನಿರ್ಮಿಸಲು ಸಾಧ್ಯತಾ ಪತ್ರ ಕೋರಿ 200ಕ್ಕೂ ಹೆಚ್ಚು ಅರ್ಜಿಗಳು ಸ್ವೀಕೃತವಾದ ಹಿನ್ನೆಲೆಯಲ್ಲಿ, ಉಡುಪಿ ತಾಲ್ಲೂಕಿಗೆ ಹೆಚ್ಚುವರಿಯಾಗಿ 48 ಸಾಧ್ಯತಾ ಪತ್ರಗಳನ್ನು ನೀಡಲು ಸರ್ಕಾರವು ತೀರ್ಮಾನಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಪಸಂಮೀ 213 ಮೀಇಯೋ 2014, ಬೆಂಗಳೂರು ದಿನಾಂಕ: 06-03-2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸಂಖ್ಯೆ: ಪಸಂಮೀ/142/ ಮೀಇಯೋ/2014, ದಿನಾಂಕ: 10-09-2014ರ ಆದೇಶವನ್ನು ಭಾಗಶಃ ಮಾರ್ಪಡಿಸಿ, ಕರಾವಳಿ ಜಿಲ್ಲೆಗಳಲ್ಲಿ 48 ಅಡಿಗಿಂತ ಹೆಚ್ಚಿನ ಉದ್ದದ ಯಾಂತ್ರೀಕೃತ ಮೀನುಗಾರಿಕಾ ದೋಣಿಗಳನ್ನು ನಿರ್ಮಿಸಲು ಉಡುಪಿ ಜಿಲ್ಲೆಗೆ ನಿಗದಿಪಡಿಸಿರುವ 150 ಸಾಧ್ಯತಾ ಪತ್ರಗಳಲ್ಲಿ, ಸರ್ಕಾರದ ಪತ್ರ ಸಂಖ್ಯೆ: ಪಸಂಮೀ/213/ಮೀಇಯೋ/2014 ದಿನಾಂಕ: 23-01-2015ರಲ್ಲಿ ಕುಂದಾಪುರ ತಾಲ್ಲೂಕಿಗೆ 60 ಸಾಧ್ಯತಾ ಪತ್ರಗಳನ್ನು ನೀಡಲು ಅನುಮತಿಸಿರುವುದನ್ನು ಹೊರತುಪಡಿಸಿ, ಉಡುಪಿ ಜಿಲ್ಲೆಗೆ ಬಾಕಿ ಉಳಿದ 90 ಸಾಧ್ಯತಾ ಪತ್ರಗಳ ಜೊತೆಗೆ ಹೆಚ್ಚುವರಿಯಾಗಿ 48 ಸಾಧ್ಯತಾ ಪತ್ರಗಳನ್ನು ಸೇರಿಸಿ ಉಡುಪಿ ತಾಲ್ಲೂಕಿಗೆ ಒಟ್ಟು 138 ಸಾಧ್ಯತಾ ಪತ್ರಗಳನ್ನು ನೀಡಲು ನಿಗದಿಪಡಿಸಿ ಆದೇಶಿಸಿದೆ.

ಆದೇಶ ಸಂಖ್ಯೆ: ಪಸಂಮೀ/142/ಮೀಇಯೋ/2014, ದಿನಾಂಕ: 10-09-2014 ರಲ್ಲಿ ನಿಗದಿಪಡಿಸಿರುವ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಹೆಚ್ಚುವರಿಯಾಗಿ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಲಾಗಿದೆ.

(1) 12 ನಾಟಿಕಲ್ ಮೈಲಿಗಿಂತ ಆಚೆಯ ಪ್ರದೇಶವು ಕೇಂದ್ರ ಸರ್ಕಾರದ ಆಡಳಿತ ವ್ಯಾಪ್ತಿಗೆ ಒಳಪಡುವುದರಿಂದ ಕೇಂದ್ರ ಸರ್ಕಾರದಿಂದ LOP (Letter of Permission) ಪಡೆಯುವುದು.

(2) ಕೇಂದ್ರ ಸರ್ಕಾರದ ಆದೇಶದಂತೆ 12 ನಾಟಿಕಲ್ ಮೈಲಿನಿಂದ ಹೊರಗೆ ಬುಲ್ ಟ್ರಾಲಿಂಗ್‌ನ ಮೂಲಕ ಮೀನುಗಾರಿಕೆಗೆ ಅವಕಾಶವಿರುವುದಿಲ್ಲ.

(3) ಯಾಂತ್ರೀಕೃತ ಮೀನುಗಾರಿಕೆ ದೋಣಿಗಳ ನಿರ್ಮಾಣಕ್ಕೆ ಸಾಧ್ಯತಾ ಪತ್ರ ನೀಡುವ ಮೊದಲು ಇನ್ನು ಮುಂದೆ ಭಾರತ ಸರ್ಕಾರದ ಅನುಮತಿ ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಶ್ಮಿ ಶಿವಶಂಕರ ಪೋಳ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀನುಗಾರಿಕೆ)

**PR. 211**

**SC. 50**

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:-** "ವಿದ್ಯಾಸಿರಿ" ಯೋಜನೆಯನ್ನು ಪ.ಜಾತಿ/ಪ.ಪಂಗಡದ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ವಿಸ್ತರಿಸುವ ಕಾರ್ಯಕ್ರಮದ ಮಂಜೂರಾತಿ ಹಾಗೂ ಅನುಷ್ಠಾನದ ಬಗ್ಗೆ ಮಾರ್ಗಸೂಚಿಗಳನ್ನು ಹೊರಡಿಸುವ ಕುರಿತು.

**ಓದಲಾಗಿದೆ:-**

1. ಮೆಟ್ರಿಕ್ ನಂತರದ ವಿದ್ಯಾರ್ಥಿವೇತನಕ್ಕೆ ಸಂಬಂಧಿಸಿದಂತೆ, ಭಾರತ ಸರ್ಕಾರದ ಪತ್ರ ಸಂಖ್ಯೆ:11017/7/2002 SCD-V ದಿನಾಂಕ: 28.01.2004
2. ಭಾರತ ಸರ್ಕಾರದ ಪತ್ರ ಸಂಖ್ಯೆ:11017/01/2008 SCD-V ದಿನಾಂಕ: 31.12.2010
3. ಸರ್ಕಾರದ ಆದೇಶ ಸಂಖ್ಯೆ:ಸಕಇ 80 ಪಕವಿ 2013 ದಿನಾಂಕ:02.07.2013.
4. ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಇವರ ಪತ್ರ ಸಂಖ್ಯೆ:ಸಕನಿ/ಇಡಿ-5/ಸಿಆರ್-36/2013-14, ದಿನಾಂಕ: 17.05.2014.

**ಪ್ರಸ್ತಾವನೆ:–**

ಮೇಲೆ (1) & (2) ರಲ್ಲಿ ಓದಲಾದ ಭಾರತ ಸರ್ಕಾರದ ಪತ್ರಗಳಲ್ಲಿ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ ಮಂಜೂರು ಮಾಡಲು ಮಾರ್ಗಸೂಚಿಗಳನ್ನು ಹಾಗೂ ನೀಡಬೇಕಾದ ಕಡ್ಡಾಯ ಶುಲ್ಕ ಮತ್ತು ನಿರ್ವಹಣಾ ಭತ್ಯೆಗಳ ವಿವರಗಳನ್ನು ನೀಡಲಾಗಿದೆ.

ಮೇಲೆ (3) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪರಿಶಿಷ್ಟ ಜಾತಿಯ ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಮಂಜೂರು ಮಾಡಲು ನಿಗಧಿಪಡಿಸಿದ್ದ ಕುಟುಂಬದ ವಾರ್ಷಿಕ ಆದಾಯದ ಮಿತಿಯನ್ನು ರೂ.2.00/–ಲಕ್ಷದಿಂದ 2.50/–ಲಕ್ಷಗಳಿಗೆ ಹೆಚ್ಚಿಸಲಾಗಿದೆ.

2014–15ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ–172 ರಲ್ಲಿ "ಸರ್ಕಾರದ ಮಹತ್ವಾಕಾಂಕ್ಷಿ ಯೋಜನೆಗಳಲ್ಲೊಂದಾದ ವಿದ್ಯಾಸಿರಿ ಯೋಜನೆಯನ್ನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಸ್ನಾತಕೋತ್ತರ ವಿದ್ಯಾರ್ಥಿಗಳಿಗೂ ಸಹ ವಿಸ್ತರಿಸಲಾಗುವುದು" ಎಂದು ಘೋಷಿಸಲಾಗಿರುತ್ತದೆ.

ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಪತ್ರದಲ್ಲಿ **ವಿದ್ಯಾಸಿರಿ** ಯೋಜನೆಯ ಸೌಲಭ್ಯವನ್ನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ವಿಸ್ತರಿಸುವ ಬಗ್ಗೆ ಹಾಗೂ ಈ ಕಾರ್ಯಕ್ರಮಕ್ಕೆ ತಗಲುವ ವೆಚ್ಚವನ್ನು 2014–15ನೇ ಸಾಲಿನ ರಾಜ್ಯ ವಲಯ ಆಯವ್ಯಯ ಯೋಜನಾ ಲೆಕ್ಕ ಶೀರ್ಷಿಕೆ–2225–01–800–0–0–19 'ಪರಿಶಿಷ್ಟ ಜಾತಿಯ ಅಭಿವೃದ್ಧಿಗೆ ವಿವಿಧ ಕಾರ್ಯಕ್ರಮಗಳಿಗಾಗಿ' ನಿಗಧಿಪಡಿಸಿದ ಅನುದಾನ ರೂ.222.00 ಕೋಟಿಗಳಲ್ಲಿ 'ವಿದ್ಯಾಸಿರಿ' ಯೋಜನೆಗೆ ಹಂಚಿಕೆ ಮಾಡಿಕೊಂಡಿರುವ ರೂ.10.00 ಕೋಟಿಗಳಲ್ಲಿ ಭರಿಸಲು ಸರ್ಕಾರದ ಆದೇಶ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಸಕಇ 134 ಪಕವಿ 2014, ಬೆಂಗಳೂರು, ದಿನಾಂಕ: 24–01–2015**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ವಿದ್ಯಾಸಿರಿ ಯೋಜನೆಯನ್ನು 2014–15ನೇ ಸಾಲಿನಿಂದ ಜಾರಿಗೆ ಬರುವಂತೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಅನುಬಂಧದಲ್ಲಿ ಲಗತ್ತಿಸಿರುವ ಅರ್ಹತೆ ಮತ್ತು ಮಂಜೂರಾತಿ ಷರತ್ತಿಗೊಳಪಟ್ಟು ವಿಸ್ತರಿಸಿ ಆದೇಶಿಸಿದೆ.

2014–15ನೇ ಸಾಲಿನಲ್ಲಿ ಈ ಕಾರ್ಯಕ್ರಮಕ್ಕೆ ತಗಲುವ ವೆಚ್ಚವನ್ನು ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ, ಲೆಕ್ಕಶೀರ್ಷಿಕೆ:–2225–01–800–0–19 ರ ಅಡಿ ಹಾಗೂ ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ, ಲೆಕ್ಕ ಶೀರ್ಷಿಕೆ 2225–02–800–0–06 ರಡಿ ಒದಗಿಸಿರುವ ಅನುದಾನದ ಮಿತಿಯಲ್ಲಿ ಭರಿಸತಕ್ಕದ್ದು. ನಂತರದ ವರ್ಷಗಳಲ್ಲಿ ಈ ಕಾರ್ಯಕ್ರಮಕ್ಕೆ ತಗುಲುವ ವೆಚ್ಚವನ್ನು ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ ಮಂಜೂರಾತಿ ಕಾರ್ಯಕ್ರಮದಡಿ ಒದಗಿಸಿರುವ ಅನುದಾನ ಹಾಗೂ ಹೆಚ್ಚುವರಿ ಊಟ ಮತ್ತು ವಸತಿ ವೆಚ್ಚಗಳ ಸಹಾಯ (ಇ.ಬಿ.ಎಲ್) ಕಾರ್ಯಕ್ರಮದಡಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 510 ವೆಚ್ಚ–3 2014, ದಿನಾಂಕ:06–08–2014ರಲ್ಲಿ ಹಾಗೂ ಯೋಜನಾ ಇಲಾಖೆಯು ಟಿಪ್ಪಣಿ ಸಂಖ್ಯೆ:ಪಿಡಿ 48 ಐಎಂಎಂ 2014, ದಿನಾಂಕ:08–09–2014 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಮಂಜುನಾಥ ಪ್ರಸಾದ್**

ಸರ್ಕಾರದ ಕಾರ್ಯದರ್ಶಿ,

ಸಮಾಜ ಕಲ್ಯಾಣ ಇಲಾಖೆ.

**ಅನುಬಂಧ**

**ಸಮಾಜ ಕಲ್ಯಾಣ ಮತ್ತು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ "ವಿದ್ಯಾಸಿರಿ (ಊಟ ಮತ್ತು ವಸತಿ ಸಹಾಯ) ಯೋಜನೆ" ಕಾರ್ಯಕ್ರಮ ಅನುಷ್ಠಾನದ ಮಾರ್ಗಸೂಚಿಗಳು**

**I. ಯೋಜನೆಯ ಉದ್ದೇಶ:–**

1. ಮೆಟ್ರಿಕ್ ನಂತರದ ಹಾಸ್ಟೆಲ್‌ಗಳಲ್ಲಿ ಅಭ್ಯರ್ಥಿಗಳ ಸಂಖ್ಯೆ ಹೆಚ್ಚಾಗಿ, ಪ್ರವೇಶಾವಕಾಶ ನೀಡಲು ಸಾಧ್ಯವಾಗದೇ ಪ್ರವೇಶಾವಕಾಶದಿಂದ ವಂಚಿತರಾದ ಸ್ನಾತಕೋತ್ತರ ಕೋರ್ಸ್‌ನಲ್ಲಿ ವ್ಯಾಸಂಗ ಮಾಡುತ್ತಿರುವ ಪರಿಶಿಷ್ಟ ಜಾತಿ/ ಪಂಗಡದ ವಿದ್ಯಾರ್ಥಿಗಳಿಗೆ ಮಾತ್ರ ಊಟ ಮತ್ತು ವಸತಿ ಸಹಾಯವನ್ನು ಒದಗಿಸುವುದು ಈ ಯೋಜನೆಯ ಉದ್ದೇಶ.
2. ಈ ಯೋಜನೆಯಡಿ ಆಯ್ಕೆಯಾದ ವಿದ್ಯಾರ್ಥಿಗಳಿಗೆ ಪ್ರತಿ ತಿಂಗಳಿಗೆ ರೂ.1500/–ರಂತೆ ಶೈಕ್ಷಣಿಕ ಅವಧಿಯ 10 ತಿಂಗಳಿಗೆ ಒಟ್ಟು ರೂ. 15.000/–ಸಹಾಯಧನವನ್ನು ಇತರೆ ನಿಬಂಧನೆಗಳಿಗೆ ಒಳಪಟ್ಟು ಅವರು ಯಾವುದಾದರೂ ಕೋರ್ ಬ್ಯಾಂಕಿಂಗ್ ವ್ಯವಸ್ಥೆ ಇರುವ ಬ್ಯಾಂಕಿನಲ್ಲಿ ತೆರೆದಿರುವ ಬ್ಯಾಂಕ್ ಖಾತೆಗೆ, ಆನ್‌ಲೈನ್ ಮೂಲಕ ಜಮಾ ಮಾಡುವುದು.
3. ವಿದ್ಯಾರ್ಥಿಗಳು (i) ವಿದ್ಯಾರ್ಥಿನಿಲಯದಲ್ಲಿ ಪ್ರವೇಶ, (ii) ವಿದ್ಯಾಸಿರಿ ಯೋಜನೆ ಇವುಗಳಲ್ಲಿ ಯಾವುದಾದರೂ ಒಂದು ಸೌಲಭ್ಯಕ್ಕೆ ಮಾತ್ರ ಅರ್ಹರಿರುತ್ತಾರೆ.
4. ಈ ಯೋಜನೆಯಡಿ ಸೌಲಭ್ಯ ಪಡೆಯಲು ಅರ್ಹರಾದವರು, ಆನ್‌ಲೈನ್ (Online) ಮೂಲಕ ಅರ್ಜಿ ಸಲ್ಲಿಸಬೇಕು.

**II.ಅರ್ಹತೆ:–**

1. ವಿದ್ಯಾರ್ಥಿಯು ಪರಿಶಿಷ್ಟ ಜಾತಿ/ಪಂಗಡಕ್ಕೆ ಸೇರಿದ್ದು, ಭಾರತದ ಪ್ರಜೆಯಾಗಿದ್ದು, ಕರ್ನಾಟಕದ ಖಾಯಂ ನಿವಾಸಿಯಾಗಿರಬೇಕು.
2. ಭಾರತ ಸರ್ಕಾರ ಅಥವಾ ರಾಜ್ಯ ಸರ್ಕಾರ ಅಧಿಸೂಚಿಸಿರುವ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗಗಳ ಪಟ್ಟಿಯಲ್ಲಿ ಸೇರಿರಬೇಕು.

3. ಕರ್ನಾಟಕದ ಶಾಸನಬದ್ಧ ವಿಶ್ವವಿದ್ಯಾಲಯಗಳ ಹಾಗೂ ಅವುಗಳ ಅಧೀನಕ್ಕೆ ಒಳಪಡುವ, ಸರ್ಕಾರಿ / ಸ್ಥಳೀಯ ಸಂಸ್ಥೆ / ಅನುದಾನಿತ ಸಂಸ್ಥೆಗಳು/ ಮಾನ್ಯತೆ ಪಡೆದ ಅನುದಾನ ರಹಿತ ಖಾಸಗಿ ಸಂಸ್ಥೆಗಳಲ್ಲಿ ಸ್ನಾತಕೋತ್ತರ ಕೋರ್ಸುಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಾಗಿರಬೇಕು.
4. ಈ ಸೌಲಭ್ಯ ಪಡೆಯುವ ವಿದ್ಯಾರ್ಥಿಯ ತಂದೆ–ತಾಯಿ/ಪೋಷಕರ ಕುಟುಂಬದ ವಾರ್ಷಿಕ ವರಮಾನ (Gross Annual Income). ರೂ.2.50/– ಲಕ್ಷಗಳ ಮಿತಿಯೊಳಗಿರಬೇಕು.
5. ವಿದ್ಯಾರ್ಥಿಗಳು ಗ್ರಾಮೀಣ ಪ್ರದೇಶದವರಾಗಿರಬೇಕು ಹಾಗೂ ವ್ಯಾಸಂಗ ಮಾಡುವ ಶಿಕ್ಷಣ ಸಂಸ್ಥೆಯಿಂದ ಕನಿಷ್ಠ 5 ಕಿ.ಮೀ ದೂರದವರಾಗಿರಬೇಕು, ಆದರೆ ವಿದ್ಯಾರ್ಥಿಯ ಸ್ವಂತ ಸ್ಥಳ, ನಗರ/ಪಟ್ಟಣ ಆಗಿದ್ದು, ಅವರು ಬೇರೆ ನಗರ/ ಪಟ್ಟಣದಲ್ಲಿ ಇರುವ ವಿದ್ಯಾಸಂಸ್ಥೆಗಳಲ್ಲಿ ಸ್ನಾತಕೋತ್ತರ ಕೋರ್ಸ್‌ಗಳಲ್ಲಿ ವ್ಯಾಸಂಗ ಮಾಡುತ್ತಿದ್ದಲ್ಲಿ, ಅಂತಹವರು ಸಹ ಈ ಸೌಲಭ್ಯಕ್ಕೆ ಅರ್ಹರಿರುತ್ತಾರೆ.
6. ಹಾಸ್ಟೆಲ್‌ಗಳಲ್ಲಿ ಅಭ್ಯರ್ಥಿಗಳ ಸಂಖ್ಯೆ ಹೆಚ್ಚಾಗಿ, ಪ್ರವೇಶಾವಕಾಶ ನೀಡಲು ಸಾಧ್ಯವಾಗದೇ ಪ್ರವೇಶಾವಕಾಶದಿಂದ ವಂಚಿತರಾದ ಸ್ನಾತಕೋತ್ತರ ಕೋರ್ಸ್‌ನಲ್ಲಿ ವ್ಯಾಸಂಗ ಮಾಡುತ್ತಿರುವ ಪರಿಶಿಷ್ಟ ಜಾತಿ/ ಪಂಗಡದ ವಿದ್ಯಾರ್ಥಿಗಳಿಗೆ ಮಾತ್ರ ಊಟ ಮತ್ತು ವಸತಿ ಸಹಾಯವನ್ನು ಒದಗಿಸಲಾಗುವುದು.
7. ಈ ಯೋಜನೆಯಲ್ಲಿ ಮುಂದಿನ ವರ್ಷದಲ್ಲಿ ಸೌಲಭ್ಯವನ್ನು ಪಡೆಯಲು ಇಚ್ಛಿಸುವ ನವೀಕರಣ ವಿದ್ಯಾರ್ಥಿಗಳು ಹಿಂದಿನ ವರ್ಷದ ಪರೀಕ್ಷೆಗಳಲ್ಲಿ ಎಲ್ಲಾ ವಿಷಯಗಳಲ್ಲೂ ಒಂದೇ ಬಾರಿಗೆ ಉತ್ತೀರ್ಣರಾಗಿರಬೇಕು (ಒಂದು ವೇಳೆ ವೈದ್ಯಕೀಯ ಕಾರಣಗಳಿಂದಾಗಿ ಪರೀಕ್ಷೆಗೆ ಹಾಜರಾಗಲು ಸಾಧ್ಯವಾಗದಿದ್ದಲ್ಲಿ ಅಂತವರು ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರ ಪಡೆದು ಸಲ್ಲಿಸಬೇಕು).
8. ಸ್ನಾತಕೋತ್ತರ ವೈದ್ಯಕೀಯ ಕೋರ್ಸ್‌ಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು, ಕೋರ್ಸ್‌ನ ಅವಧಿಯಲ್ಲಿ ಮೆಡಿಕಲ್ ಪ್ರಾಕ್ಟೀಸ್ ಮಾಡುತ್ತಿದ್ದಲ್ಲಿ, ಈ ಸೌಲಭ್ಯಕ್ಕೆ ಅರ್ಹರಿರುವುದಿಲ್ಲ.
9. ಸಮಾನ ಕೋರ್ಸ್‌ಗಳಲ್ಲಿ ಒಂದಕ್ಕಿಂತ ಹೆಚ್ಚು ಬಾರಿ ವ್ಯಾಸಂಗ ಮಾಡುತ್ತಿದ್ದಲ್ಲಿ ಅಂತಹವರು ಅರ್ಹರಿರುವುದಿಲ್ಲ. (ಉದಾ: ಎಂ.ಎ (ಕನ್ನಡ) ನಂತರ ಎಂ.ಎ (ಇಂಗ್ಲೀಷ್), ಇತ್ಯಾದಿಗಳಿಗೆ ಪ್ರವೇಶ ಪಡೆದಿದ್ದಲ್ಲಿ).
10. ಕಲೆ, ವಿಜ್ಞಾನ, ಹಾಗೂ ವಾಣಿಜ್ಯ ಕೋರ್ಸ್‌ಗಳ ಸ್ನಾತಕೋತ್ತರ ಪದವಿಗಳಲ್ಲಿ ಉತ್ತೀರ್ಣ / ಅನುತ್ತೀರ್ಣರಾದವರು ಅಂಗೀಕೃತ ವೃತ್ತಿಪರ ಅಥವಾ ತಾಂತ್ರಿಕ ಸರ್ಟಿಫಿಕೇಟ್, ಕೋರ್ಸ್‌ಗಳಲ್ಲಿ ವ್ಯಾಸಂಗ ಮಾಡಿದ್ದಲ್ಲಿ ಹಾಗೂ ಇತರೆ ರೀತಿ ಅರ್ಹರಿದ್ದಲ್ಲಿ ಅವರು ಈ ಯೋಜನೆಯ ಸೌಲಭ್ಯ ಪಡೆಯಲು ಅರ್ಹರಿರುತ್ತಾರೆ. ಒಂದಕ್ಕಿಂತ ಹೆಚ್ಚು ಬಾರಿ ಕೋರ್ಸುಗಳ ಬದಲಾವಣೆ ಮಾಡಿಕೊಂಡವರು ಅರ್ಹರಿರುವುದಿಲ್ಲ.
11. ವಿದ್ಯಾಸಿರಿ ಯೋಜನೆಯ ಸೌಲಭ್ಯ ಪಡೆಯುವವರು, ಭಾರತ ಸರ್ಕಾರ ಹೊರಡಿಸಿರುವ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ ಮಂಜೂರಾತಿ ಯೋಜನೆಯಲ್ಲಿರುವ ಎಲ್ಲಾ ಅರ್ಹತೆಗಳನ್ನು ಪೂರೈಸಿರತಕ್ಕದ್ದು.

III. **ಅರ್ಜಿ ಸಲ್ಲಿಸುವ ವಿಧಾನ:–**

1. ಈ ಯೋಜನೆಯಡಿ ಸಹಾಯ ಧನ ಪಡೆಯಲು ಇಚ್ಛಿಸುವ ಹಾಗೂ ಅರ್ಹತೆಯುಳ್ಳ ವಿದ್ಯಾರ್ಥಿಗಳು, ನಿಗದಿತ ಅರ್ಜಿ ನಮೂನೆಯಲ್ಲಿ, ಆನ್‌ಲೈನ್ ಮೂಲಕ ಎಲ್ಲಾ ವಿವರಗಳನ್ನು ನಮೂದಿಸಿ, ಅರ್ಜಿ ಸಲ್ಲಿಸಬೇಕು.
2. ಅರ್ಜಿಯೊಂದಿಗೆ ಲಗತ್ತಿಸಬೇಕಾದ ಎಲ್ಲಾ ಮೂಲ ದಾಖಲೆಗಳನ್ನು ಸ್ಕ್ಯಾನ್ (Scan) ಮಾಡಿ, ಅಪ್‌ಲೋಡ್ (Upload) ಮಾಡಬೇಕು.
3. ಯಾವುದಾದರೂ ಕೋರ್ ಬ್ಯಾಂಕಿಂಗ್ ವ್ಯವಸ್ಥೆ ಇರುವ ಬ್ಯಾಂಕಿನಲ್ಲಿ, ವಿದ್ಯಾರ್ಥಿಯ ಹೆಸರಿನಲ್ಲಿ (ಎಸ್.ಎಸ್.ಎಲ್.ಸಿ ಅಂಕಪಟ್ಟಿಯಲ್ಲಿ ದಾಖಲಾಗಿರುವ ರೀತಿಯಲ್ಲಿ), ಉಳಿತಾಯ ಖಾತೆಯನ್ನು ತೆರೆದು, ವಿವರಗಳನ್ನು ಅರ್ಜಿಯಲ್ಲಿ ನಮೂದಿಸಬೇಕು.

IV. **ವಿಶ್ವವಿದ್ಯಾಲಯಗಳ ವಿಭಾಗ ಮುಖ್ಯಸ್ಥರು/ಕಾಲೇಜು ಪ್ರಾಂಶುಪಾಲರು ಮತ್ತು ಇಲಾಖೆಯ ಪರಿಶೀಲನಾ ಅಧಿಕಾರಿ ಕೈಗೊಳ್ಳಬೇಕಾದ ಕ್ರಮಗಳು:–**

1. ವಿಶ್ವವಿದ್ಯಾಲಯಗಳ/ಕಾಲೇಜಿನ ಸ್ನಾತಕೋತ್ತರ ವಿದ್ಯಾರ್ಥಿಗಳು ಆನ್‌ಲೈನ್ ಮೂಲಕ ಸಲ್ಲಿಸುವ ಅರ್ಜಿಗಳ ಸ್ವೀಕೃತಿ ಪತ್ರ ಮತ್ತು ಅಪ್‌ಲೋಡ್ ಮಾಡಿರುವ ಎಲ್ಲಾ ದಾಖಲೆಗಳ ದೃಢೀಕೃತ ಪ್ರತಿಗಳನ್ನು ವಿದ್ಯಾರ್ಥಿಗಳಿಂದ ಪಡೆದುಕೊಳ್ಳಬೇಕು. ಸದರಿ ಮಾಹಿತಿಯನ್ನು ಅವರು ಸಲ್ಲಿಸಿರುವ ದಾಖಲೆಗಳನ್ನು ವಿಶ್ವವಿದ್ಯಾಲಯ/ಕಾಲೇಜಿನಲ್ಲಿ ಲಭ್ಯವಿರುವ ಮಾಹಿತಿಗಳೊಂದಿಗೆ ಪರಿಶೀಲಿಸಿ, ಆನ್‌ಲೈನ್‌ನಲ್ಲಿ ದೃಢೀಕರಿಸಬೇಕು. ಈ ರೀತಿ ದೃಢೀಕರಿಸಲ್ಪಟ್ಟ ಪಟ್ಟಿಯ ಹಾರ್ಡ್ ಪ್ರತಿಯನ್ನು ಡೌನ್‌ಲೋಡ್ ಮಾಡಿಕೊಂಡು, ಪ್ರತಿ ವಿದ್ಯಾರ್ಥಿವಾರು ಅಗತ್ಯ ದಾಖಲೆಗಳನ್ನು ಅನುಕ್ರಮವಾಗಿ ಜೋಡಿಸಿ, ಸಿದ್ದಪಡಿಸಿಟ್ಟುಕೊಳ್ಳಬೇಕು.
2. ಸಮಾಜ ಕಲ್ಯಾಣ ಇಲಾಖೆ/ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯ ಅಧಿಕೃತ "ಪರಿಶೀಲನಾಧಿಕಾರಿ" ವಿಶ್ವವಿದ್ಯಾಲಯದ ವಿಭಾಗ ಮುಖ್ಯಸ್ಥರು/ಕಾಲೇಜಿನ ಪ್ರಾಂಶುಪಾಲರು ಈ ಮೇಲಿನಂತೆ ಸಿದ್ದಪಡಿಸಿದ ದೃಢೀಕೃತ ಪಟ್ಟಿಯಲ್ಲಿ ನಮೂದಾಗಿರುವ ಎಲ್ಲಾ ವಿದ್ಯಾರ್ಥಿಗಳ ದಾಖಲೆಗಳು ಸರಿ ಇರುವ ಬಗ್ಗೆ ಹಾಗೂ ಈ ಸೌಲಭ್ಯಕ್ಕೆ ಅವರು ಅರ್ಹರಿರುವ ಬಗ್ಗೆ ಆನ್‌ಲೈನ್‌ನಲ್ಲಿ ದೃಢೀಕರಿಸಬೇಕು. ಸದರಿ ದಾಖಲಾತಿಗಳನ್ನು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಗೆ ಸಲ್ಲಿಸಬೇಕು.
3. ಈ ರೀತಿ ಸಲ್ಲಿಸಿದ ಮಾಹಿತಿ ಆಧಾರದ ಮೇಲೆ ತಾಲ್ಲೂಕು ಮಟ್ಟದ ಇಲಾಖಾ ಅಧಿಕಾರಿಗಳು ಪರಿಶೀಲನೆ ಮಾಡಿ ಅರ್ಹ ವಿದ್ಯಾರ್ಥಿಗಳಿಗೆ ವಿದ್ಯಾಸಿರಿ ಯೋಜನೆಯಡಿ ಊಟ ಮತ್ತು ವಸತಿ ಸಹಾಯ ಯೋಜನೆಯನ್ನು ಮಂಜೂರು ಮಾಡಬೇಕು.
4. ಈ ಮೇಲಿನಂತೆ ಮಂಜೂರು ಮಾಡಿದ, ವಿದ್ಯಾರ್ಥಿಗಳಿಗೆ ಸಂಬಂಧಿಸಿದಂತೆ, ವಿಶ್ವವಿದ್ಯಾಲಯದ ವಿಭಾಗ ಮುಖ್ಯಸ್ಥರು/ ಕಾಲೇಜಿನ ಪ್ರಾಂಶುಪಾಲರು ಪ್ರತಿ ತಿಂಗಳ ಹಾಜರಾತಿಯನ್ನು ಅವರ ಹೆಸರು ಮತ್ತು ತರಗತಿಯ ವಿವರಗಳನ್ನು ನಮೂದಿಸಿ ಧೃಡೀಕರಿಸಿ, ನಂತರದ ತಿಂಗಳ ಮೊದಲನೇ ವಾರದಲ್ಲಿ ಸಮಾಜ ಕಲ್ಯಾಣ ಇಲಾಖೆ/ ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆಗಳ ವೆಬ್‌ಸೈಟ್‌ನಲ್ಲಿ ಅಪ್‌ಲೋಡ್ ಮಾಡಬೇಕು. ಅದರ ಪ್ರತಿಯನ್ನು ಸಂಬಂಧ ಪಟ್ಟ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸಬೇಕು.

5. ವಿದ್ಯಾರ್ಥಿಗಳಿಗೆ ನೀಡುವ ಸೌಲಭ್ಯಗಳು, ಅವರ ಶೈಕ್ಷಣಿಕ ಪ್ರಗತಿ ಮತ್ತು ಉತ್ತಮ ನಡತೆಗೆ ಒಳಪಟ್ಟಿರುತ್ತದೆ. ಆದ ಕಾರಣ ಶೈಕ್ಷಣಿಕ ಪ್ರಗತಿಯು ತೃಪ್ತಿಕರವಾಗಿಲ್ಲದಿದ್ದಲ್ಲಿ, ಅಧಿಕೃತವಾಗಿ ಅನುಮತಿಯನ್ನು ಪಡೆಯದೇ ಪದೇ ಪದೇ ತರಗತಿಗಳಿಗೆ ಗೈರು ಹಾಜರಾದಲ್ಲಿ ಅಥವಾ ಇನ್ನಾವುದೇ ಕಾನೂನು ಬಾಹಿರ ಚಟುವಟಿಕೆಗಳಲ್ಲಿ ತೊಡಗಿದ್ದಲ್ಲಿ, ಈ ಸೌಲಭ್ಯಗಳನ್ನು ತಕ್ಷಣದಿಂದಲೇ ಹಿಂದಕ್ಕೆ ಪಡೆಯಲಾಗುವುದು. ಆದ ಕಾರಣ ಈ ರೀತಿ ವರ್ತಿಸುವ ವಿದ್ಯಾರ್ಥಿಗಳ ಬಗ್ಗೆ ವೆಬ್‌ಪೋರ್ಟಲ್‌ನಲ್ಲಿ ಷರಾ ನಮೂದಿಸಬೇಕು.

**V. ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ/ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳು/ಯೋಜನಾ ಸಮನ್ವಯಾಧಿಕಾರಿ, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ, ಇವರುಗಳು ಅನುದಾನವನ್ನು ಮರುಹಂಚಿಕೆ ಮಾಡಲು ಅನುಸರಿಸಬೇಕಾದ ಕಾರ್ಯವಿಧಾನ:–**

1. ಆಯಾ ಜಿಲ್ಲೆಗೆ ಆಯಾ ಆರ್ಥಿಕ ವರ್ಷದಲ್ಲಿ ಲಭ್ಯವಿರುವ ಅನುದಾನವನ್ನು ವಿದ್ಯಾರ್ಥಿಗಳ ಅರ್ಹತೆ ಮತ್ತು ಆದಾಯಕ್ಕೆ (Merit cum Means) ಅನುಗುಣವಾಗಿ, ವಿದ್ಯಾರ್ಥಿಗಳ ಮೆರಿಟ್ ಪಟ್ಟಿಯನ್ನು ತಯಾರಿಸಬೇಕು ಮತ್ತು ಈ ಮೆರಿಟ್ ಪಟ್ಟಿಯಂತೆ, ತಾಲ್ಲೂಕುವಾರು, ಅನುದಾನವನ್ನು ಹಂಚಿಕೆ ಮಾಡಬೇಕು.
2. ಜಿಲ್ಲಾ ಪಂಚಾಯತಿಯಿಂದ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳಿಗೆ ನೇರವಾಗಿ ಅನುದಾನವನ್ನು ಮೇಲಿನಂತೆ ಮರು ಹಂಚಿಕೆ ಮಾಡಿ ಬಿಡುಗಡೆ ಮಾಡಬೇಕು.
3. ಸದರಿ ಮೆರಿಟ್ ಪಟ್ಟಿಯ ಹಾರ್ಡ್ ಪ್ರತಿಯನ್ನು ಸಂಬಂಧಪಟ್ಟ ತಾಲ್ಲೂಕು ಅಧಿಕಾರಿಗಳಿಗೆ ಒದಗಿಸುವುದು.
4. ವಿವಿಧ ಕೋರ್ಸುಗಳು, ಶೈಕ್ಷಣಿಕ ವರ್ಷದ ವಿವಿಧ ತಿಂಗಳುಗಳಲ್ಲಿ ಪ್ರಾರಂಭವಾಗುವ ಕಾರಣ, ವಿಳಂಬವಾಗಿ ಪ್ರಾರಂಭವಾಗುವ ಕೋರ್ಸುಗಳಿಗೆ ಅರ್ಜಿ ಸಲ್ಲಿಸಲು ಪ್ರತ್ಯೇಕ ಕೊನೆಯ ದಿನಾಂಕವನ್ನು ನಿಗದಿಪಡಿಸತಕ್ಕದ್ದು, ಇಂತಹ ಕೋರ್ಸುಗಳಿಗೆ ಪ್ರತ್ಯೇಕವಾಗಿ ಪ್ರವರ್ಗವಾರು ಮೆರಿಟ್ ಪಟ್ಟಿಯನ್ನು ತಯಾರಿಸಬೇಕು ಹಾಗೂ ಇದಕ್ಕಾಗಿ ಅಗತ್ಯವಿರುವಷ್ಟು ಅನುದಾನವನ್ನು ಕಾಯ್ದಿರಿಸಿಕೊಳ್ಳಬೇಕು.

**VI. ತಪ್ಪು ಮಾಹಿತಿಗೆ ದಂಡ:–**

1. ಅರ್ಜಿದಾರರು ಅಥವಾ ಶಿಕ್ಷಣ ಸಂಸ್ಥೆಯು, ತಪ್ಪು ಮಾಹಿತಿ ನೀಡಿದ್ದಲ್ಲಿ, ಅಂತಹವರ ವಿರುದ್ಧ ನಿಯಮಾನುಸಾರ ಈ ಕೆಳಗಿನಂತೆ ಕ್ರಮ ತೆಗೆದುಕೊಳ್ಳಲಾಗುವುದು.
2. ಭಾರತೀಯ ದಂಡ ಸಂಹಿತೆಯ ಕಲಂ 177 ಮತ್ತು 181ರ ಪ್ರಕಾರ, ಶಿಕ್ಷೆಗೆ ಗುರಿಪಡಿಸಲಾಗುತ್ತದೆ.
3. ಕಾನೂನಿನಂತೆ ಕ್ರಮ ಜರುಗಿಸುವುದರ ಜೊತೆಗೆ, ವಿದ್ಯಾರ್ಥಿಯು ಪಡೆದ ಒಟ್ಟು ಆರ್ಥಿಕ ಸಹಾಯವನ್ನು ಆ ವಿದ್ಯಾರ್ಥಿಯಿಂದ ಅಥವಾ ಅವರ ತಂದೆ–ತಾಯಿ / ಪೋಷಕರಿಂದ, ಭೂ ಕಂದಾಯ ಬಾಕಿಯೆಂದು ವಸೂಲಿ ಮಾಡಲಾಗುವುದು.
4. ಮಂಜೂರು ಮಾಡುವ ಅಧಿಕಾರಿಗಳು ಸಹ, ನಿಯಮಗಳ ವಿರುದ್ಧ ಮಂಜೂರು ಮಾಡಿ, ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟು ಮಾಡಿದಲ್ಲಿ, ಅಂತಹವರ ವಿರುದ್ಧ ಶಿಸ್ತಿನ ಕ್ರಮ ಜರುಗಿಸುವುದಲ್ಲದೆ ಕ್ರಿಮಿನಲ್ ಮೊಕದ್ದಮೆ ಹೂಡಲಾಗುವುದು ಹಾಗೂ ಈ ರೀತಿ ತಪ್ಪಾಗಿ ಪಾವತಿಯಾದ ಮೊತ್ತವನ್ನು ಅವರ ವೇತನದಿಂದ ವಸೂಲಿ ಮಾಡಲಾಗುವುದು.

**VII. ಇತರೆ:–**

1. ಜಾತಿಗಳ ಪಟ್ಟಿ, ಕುಟುಂಬದ ವಾರ್ಷಿಕ ವರಮಾನ, ಅರ್ಹತೆ, ಇತ್ಯಾದಿ, ಸರ್ಕಾರವು ಕಾಲ ಕಾಲಕ್ಕೆ ಹೊರಡಿಸುವ ಆದೇಶಗಳನ್ವಯ ಪರಿಷ್ಕರಣೆಗೆ ಒಳಪಟ್ಟಿರುತ್ತದೆ.
2. ಈ ಯೋಜನೆಯ ಅನುಷ್ಠಾನಕ್ಕೆ ಅಗತ್ಯವಿರುವ ಅರ್ಜಿ ನಮೂನೆ, ಕಾರ್ಯವಿಧಾನ ಇತ್ಯಾದಿಗಳನ್ನು ಸಮಾಜ ಕಲ್ಯಾಣ ಇಲಾಖೆಯ ಆಯುಕ್ತರು / ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯ ನಿರ್ದೇಶಕರು, ನಿರ್ಧರಿಸುವುದು.

**ಎನ್.ಮಂಜುನಾಥ ಪ್ರಸಾದ್**
ಸರ್ಕಾರದ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

**PR. 148**
**SC. 500**

## ಇಂಧನ ಸಚಿವಾಲಯ

**ವಿಷಯ:** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ವತಿಯಿಂದ ಎಲ್‌ಇಡಿ ಸೌರಶಕ್ತಿ ಕಂದೀಲುಗಳನ್ನು ಒದಗಿಸುವ ಯೋಜನೆಗೆ ಹೆಚ್ಚಿನ ಸ್ಪಷ್ಟೀಕರಣ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಇಎನ್ 40 ಪಿಎಸ್‌ಆರ್ 2013 (ಭಾಗ–1), ಬೆಂಗಳೂರು, ದಿನಾಂಕ 30–10–2013.
2. ಸರ್ಕಾರದ ಆದೇಶ ಸಂಖ್ಯೆ: ಇಎನ್ 40 ಪಿಎಸ್‌ಆರ್ 2013 (ಭಾಗ–1), ಬೆಂಗಳೂರು, ದಿನಾಂಕ 28–11–2013.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರ ಪತ್ರ ಸಂಖ್ಯೆ: KREDL/07/SOG/156C/2014/594, ದಿನಾಂಕ 27–02–2015.

ಮೇಲೆ ಓದಲಾದ (1) ರ ಆದೇಶದಲ್ಲಿ ಅಸಂಪ್ರದಾಯಕ ಇಂಧನ ಮೂಲವಾದ ಸೌರಶಕ್ತಿಯನ್ನು ಪ್ರೋತ್ಸಾಹಿಸುವ ಸಲುವಾಗಿ, ಸೌರ ವಿದ್ಯುತ್ ಯೋಜನೆಗಳನ್ನು ಅಭಿವೃದ್ಧಿಪಡಿಸಲು ಸರ್ಕಾರವು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುತ್ತದೆ. ಅದರಂತೆ, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ವತಿಯಿಂದ ಗೃಹೋಪಯೋಗಕ್ಕೆ ಎಲ್.ಇ.ಡಿ. ಸೌರಶಕ್ತಿ ಕಂದೀಲುಗಳನ್ನು, ದುರ್ಗಮ ಹಾಗೂ ಗುಡ್ಡಗಾಡು ಪ್ರದೇಶಗಳ ಮತ್ತು ವಿದ್ಯುತ್ ಸರಬರಾಜು ಇಲ್ಲದ ಗ್ರಾಮ/ಕೊಪ್ಪಲುಗಳ ಫಲಾನುಭವಿಗಳಿಗೆ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಹಾಗೂ ವಿದ್ಯುತ್ ವಿತರಣಾ ಕಂಪನಿಗಳ ಸಮನ್ವಯದೊಂದಿಗೆ ಗುರುತಿಸಿ, ಇಂತಹ ಫಲಾನುಭವಿಗಳಿಗೆ ಸೌರಶಕ್ತಿ ಕಂದೀಲುಗಳನ್ನು ಒದಗಿಸುವ ಯೋಜನೆಯನ್ನು ರೂಪಿಸಿದೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಇದರಲ್ಲಿ ರಾಜ್ಯ ಸರ್ಕಾರದಿಂದ ಶೇ.75 ರಷ್ಟು ಸಹಾಯಧನವನ್ನು ನೀಡಲಾಗುತ್ತದೆ ಹಾಗೂ ಫಲಾನುಭವಿಗಳ ವಂತಿಕೆಯನ್ನು ಶೇ.25 ರಷ್ಟಿಗೆ ಸೀಮಿತಗೊಳಿಸಲಾಗಿದೆ.

ಮೇಲೆ ಓದಲಾದ (2) ರ ಆದೇಶದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಎಲ್ಇಡಿ ಸೌರಶಕ್ತಿ ಕಂದೀಲುಗಳನ್ನು ಒದಗಿಸುವ ಯೋಜನೆಗೆ ಸರ್ಕಾರದ ಸಹಾಯಧನವನ್ನು ಬಿಡುಗಡೆಗೊಳಿಸಲಾಗಿರುತ್ತದೆ.

ಮೇಲೆ ಓದಲಾದ (3) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಯೋಜನೆಯ ಅನುಷ್ಠಾನ ಸಂಬಂಧ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯವರು ಯೋಜನೆಗೆ ಅಂದಾಜಿಸಿದ 30188 ಫಲಾನುಭವಿಗಳಲ್ಲಿ ಕೇವಲ 8430 ಫಲಾನುಭವಿಗಳ ಪಟ್ಟಿಯನ್ನು ನೀಡಿರುತ್ತಾರೆ ಹಾಗೂ ಉಳಿದ ಫಲಾನುಭವಿಗಳ ಪಟ್ಟಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಯೋಜನೆಯ ಅನುಷ್ಠಾನ ಸಾಧ್ಯವಾಗುತ್ತಿಲ್ಲ ಎಂದು ವರದಿ ಮಾಡಿರುತ್ತಾರೆ. ಈ ಯೋಜನೆಯನ್ನು 2013-14 ನೇ ಸಾಲಿನಲ್ಲಿ ಹಮ್ಮಿಕೊಂಡಿರುವುದರಿಂದ ಹಾಗೂ ಕ್ರೆಡಲ್‌ರವರ ಮೇಲೆ ಓದಲಾದ (3) ರ ಪತ್ರದನ್ವಯ ಈಗಾಗಲೇ ಖರೀದಿ ಆದೇಶ ಮಾಡಲಾಗಿರುತ್ತದೆ ಎಂದು ತಿಳಿಸಿರುತ್ತಾರೆ.

ಯೋಜನೆಯ ಅನುಷ್ಠಾನಕ್ಕೆ ಹೆಚ್ಚಿನ ಕಾಲಾವಕಾಶ ಇಲ್ಲದಿರುವುದರಿಂದ ಹಾಗೂ ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಇಎನ್ 30 ವಿಎಸ್‌ಸಿ 2014, ಬೆಂಗಳೂರು, ದಿನಾಂಕ: 17-03-2015**

I. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಮುಖಾಂತರ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಹಾಗೂ ವಿದ್ಯುತ್ ವಿತರಣಾ ಕಂಪನಿಗಳೊಂದಿಗೆ ಫಲಾನುಭವಿಗಳನ್ನು ಗುರುತಿಸುವ ಬದಲು ವಿದ್ಯುತ್ ವಿತರಣಾ ಕಂಪನಿಗಳೇ ಫಲಾನುಭವಿಗಳನ್ನು ಗುರುತಿಸುವುದು.

II. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯು, ಎಲ್.ಇ.ಡಿ. ಸೌರಶಕ್ತಿ ಕಂದೀಲುಗಳನ್ನು ಒದಗಿಸಿ, ವಿದ್ಯುತ್ ವಿತರಣಾ ಕಂಪನಿಗಳು ಸ್ವೀಕರಿಸಿದ ನಂತರ ಫಲಾನುಭವಿಗಳ ವಂತಿಕೆಯನ್ನು ವಿತರಣಾ ಕಂಪನಿಗಳು ಮುಂಗಡವಾಗಿ ಕ್ರೆಡಲ್ ಸಂಸ್ಥೆಗೆ ಬಿಡುಗಡೆ ಮಾಡುವುದು ಮತ್ತು ಫಲಾನುಭವಿಗಳ ವಂತಿಕೆಯನ್ನು ವಿತರಣಾ ಕಂಪನಿಗಳು ಎಲ್.ಇ.ಡಿ. ಸೌರಶಕ್ತಿ ಕಂದೀಲುಗಳನ್ನು ವಿತರಿಸುವಾಗ ಫಲಾನುಭವಿಗಳಿಂದ ಸಂಗ್ರಹಿಸುವುದು.

III. ವಿದ್ಯುತ್ ವಿತರಣಾ ಕಂಪನಿಗಳು ಫಲಾನುಭವಿಗಳನ್ನು ಈ ಕೆಳಕಂಡ ಸಂಖ್ಯೆಯಲ್ಲಿ ಗುರುತಿಸಿ ಎಲ್.ಇ.ಡಿ. ಸೌರಶಕ್ತಿ ಕಂದೀಲುಗಳನ್ನು ವಿತರಿಸುವುದು:

| ಕ್ರಮ ಸಂಖ್ಯೆ | ವಿದ್ಯುತ್ ವಿತರಣಾ ಕಂಪನಿ | ಫಲಾನುಭವಿಗಳ ಸಂಖ್ಯೆ |
|---|---|---|
| 1 | ಬೆಸ್ಕಾಂ | 3000 |
| 2 | ಸೆಸ್ಕ್ | 7500 |
| 3 | ಜೆಸ್ಕಾಂ | 4688 |
| 4 | ಹೆಸ್ಕಾಂ | 8500 |
| 5 | ಮೆಸ್ಕಾಂ | 6500 |
| ಒಟ್ಟು | | 30188 |

ಮೇಲೆ ಓದಲಾದ ಕ್ರಮಾಂಕ (1) ರ ಆದೇಶದಲ್ಲಿನ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಲ್.ರಾಮಚಂದ್ರ**
ಸರ್ಕಾರದ ಉಪ ಕಾರ್ಯದರ್ಶಿ
ಇಂಧನ ಇಲಾಖೆ,

**PR. 223**

*ಮುದ್ರಕರು ಹಾಗೂ ಪ್ರಕಾಶಕರು:-* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59